KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ನವೆಂಬರ್ ೫, ೨೦೦೯ (ಕಾರ್ತೀಕ ೧೪, ಶಕ ವರ್ಷ ೧೯೩೧) | ಸಂಚಿಕೆ ೪೪ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ,**
**ಆರ್.ವಿ. ಕಾಲೇಜು ಪೋಸ್ಟ್, ಸರ್ಕಾರಿ ಕೇಂದ್ರ ಮುದ್ರಣಾಲಯ, ಮೈಸೂರು ರಸ್ತೆ, ಬೆಂಗಳೂರು–59**
**ಬಹಿರಂಗ ಹರಾಜಿನ ಬಗ್ಗೆ ಅಧಿಸೂಚನೆ**
**ಸಂಖ್ಯೆ : ಎಸ್.ಟಿ.ವೈ/ 286 / 2009–10, ದಿನಾಂಕ: 22ನೇ ಅಕ್ಟೋಬರ್ 2009**

**ವಿಷಯ:** ಹಳೆಯ ಅನುಪಯುಕ್ತ ಆಂಗ್ಲ ಮತ್ತು ಕನ್ನಡ ಬೆರಳಚ್ಚು ಯಂತ್ರಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡುವುದರ ಬಗ್ಗೆ.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತಿಳಿಯಪಡಿಸುವುದೇನೆಂದರೆ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಇವರು ಈ ಕಛೇರಿಯಲ್ಲಿ ಒಟ್ಟು 798 ಸಂಖ್ಯೆಯುಳ್ಳ ಹಳೆಯ ಅನುಪಯುಕ್ತ ಬೆರಳಚ್ಚು ಯಂತ್ರಗಳನ್ನು ಈಗ ಎಲ್ಲಿವೆಯೋ ಹಾಗೆಯೇ ಅಂಥ ಸ್ಥಿತಿಯಲ್ಲಿ ಒಂದು ಲಾಟ್‌ನಲ್ಲಿ 100 ಬೆರಳಚ್ಚು ಯಂತ್ರಗಳಂತೆ ಒಟ್ಟು ಎಂಟು ಲಾಟ್‌ಗಳಲ್ಲಿ, ನಿರ್ದೇಶಕರು, ಅಥವಾ ಇವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳ ಸಮಕ್ಷಮದಲ್ಲಿ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಪೀಣ್ಯ ಹಳೆಯ ಮುದ್ರಣಾಲಯದ ಕಟ್ಟಡ, 1ನೇ ಹಂತ, ಪೀಣ್ಯ, ಎಂ.ಎಸ್.ಐ.ಎಲ್ ಕಛೇರಿಯ ಹತ್ತಿರ, ತುಮಕೂರು ರಸ್ತೆ, ಬೆಂಗಳೂರು–58 ಇವರ ಕಛೇರಿಯ ಆವರಣದಲ್ಲಿ ದಿನಾಂಕ:1.12.09 ಮತ್ತು 2.12.09 ರಂದು ಬಹಿರಂಗ ಹರಾಜು ಮೂಲಕ ವಿಲೇವಾರಿಯನ್ನು ಮಾಡಲಾಗುವುದು. (ಅವಶ್ಯವಿದ್ದಲ್ಲಿ 1 ದಿನಕ್ಕೆ ಮುಂದುವರೆಸಲಾಗುವುದು)

ಈ ಹರಾಜಿನಲ್ಲಿ ಭಾಗವಹಿಸಲು ಇಚ್ಛೆಯುಳ್ಳ ಸಾರ್ವಜನಿಕರು ಹರಾಜು ಪ್ರಾರಂಭವಾಗುವುದಕ್ಕೆ ಒಂದು ಗಂಟೆ ಮುಂಚಿತವಾಗಿ ಪೀಣ್ಯದಲ್ಲಿರುವ ಹಳೆಯ ಕಟ್ಟಡದ ಮೇಲ್ಕಂಡ ವಿಳಾಸದಲ್ಲಿ ಹರಾಜು ನಡೆಯುವುದರಿಂದ ರೂ. 10,000/– (ಹತ್ತು ಸಾವಿರ ರೂ.ಗಳು ಮಾತ್ರ) ಭದ್ರತಾ ಠೇವಣಿಯನ್ನು ನಗದಾಗಿ ಇಡಬೇಕಾಗುತ್ತದೆ. ಸದರಿ ಹರಾಜಿನ ಬಗ್ಗೆ ಹೆಚ್ಚಿನ ಮಾಹಿತಿ ಹಾಗೂ ವಿವರಗಳು ಬೇಕಾದಲ್ಲಿ ಸಹಾಯಕ ನಿರ್ದೇಶಕರು, ಸರ್ಕಾರಿ ಲೇಖನ ಸಾಮಗ್ರಿ ಮಳಿಗೆ, ಮೈಸೂರು ರಸ್ತೆ, ಬೆಂಗಳೂರು–59 ಈ ಕಛೇರಿಯಲ್ಲಿ ಯಾವುದೇ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10–00 ರಿಂದ 4–00 ಗಂಟೆಯವರೆಗೆ ಪಡೆಯಬಹುದಾಗಿದೆ.

ನಿರ್ದೇಶಕರು

**OFFICE OF THE DIRECTOR OF PRINTING STATIONERY AND PUBLICATIONS,**
**R.V. College Post, Government Central Press, Mysore Road, Bangalore-560059**
**NOTIFICATION**
**No. Stationery/ 286 / 2009-10, Dated: 22nd October 2009**

**Sub:** Public Auction of Unserviceable English and Kannada typewriters regarding.

It is hereby notified for the information of Public that 798 Nos of old Unserviceble English and Kannada typewriters have been proposed for pubic auction "AS IS WHERE IS" ON A LOT BASIS, each lot contains One hundred machines, total eight lots. The Director, Department of Printing Stationery and Publications, or his representatives will conduct the auction in the Premises of **The Director, Printing Stationery and Publications, Central Press Old Building, Ist stage, Peenya, near M.S.I.L. Office, Tumkur Road, Bangalore-58 on 1.12.09 to 2.12.09.** (will be contained if necessary for another day)

The willing Bidders are hereby informed to deposit EMD Rs. 10,000-00 (Ten thousand only) in cash, one Hour before the commencement of the Auction and to Participate in the Auction. The Public Auction will be conducted in the above said Peenya Premises.

Further details may be had from the office of the Assistant Director Government Stationery Depot., Mysore Road, Bangalore-59 during the working hours between 10-00 A.M. to 4-00 P.M.

P.R. 909 Director

## ಇಂಧನ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಇಎನ್ 42 ಇಬಿಎಸ್ 2009, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್ 2009**

ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) ಸಾಮಾನ್ಯ ನಿಯಮಗಳು 2006 ಹಾಗೂ ತಿದ್ದುಪಡಿ ನಿಯಮಗಳು 2007 ರನ್ವಯ ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ ಸಹಾಯಕ ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ಆಯ್ಕೆಗೊಂಡ ಈ ಕೆಳಕಂಡ ಅಭ್ಯರ್ಥಿಗಳನ್ನು ಮುಖ್ಯ ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ **ರೂ.11400–300–12300–350–14400–400–16800–450–19500–525–21600** ವೇತನ ಶ್ರೇಣಿಯ ಸಹಾಯಕ ವಿದ್ಯುತ್ ಪರಿವೀಕ್ಷಕರ ಹುದ್ದೆಯಲ್ಲಿ ಎರಡು ವರ್ಷಗಳ ಪರೀಕ್ಷಾರ್ಥಿಯಾಗಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಿಗೆ ನೇಮಕ ಮಾಡಿದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ (ಶ್ರೀಮತಿ / ಶ್ರೀಯುತ) | ಮೀಸಲಾತಿ | ನೇಮಕ ಮಾಡಲಾದ ಸ್ಥಳ |
|---|---|---|---|
| 1 | ಶ್ರೀಮತಿ ಉಷಾ ಸಿ.ಎನ್.<br>ತಂದೆ ನಿಂಗೇಗೌಡ ಸಿ.ಎನ್.<br>ಜಿಲ್ಲಾ ಉಪ ಜೈಲು ಕ್ವಾರ್ಟರ್ಸ್,<br>ಬಸವಣ್ಣ ವೃತ್ತ, ಸಂತೆ ಪೇಟೆ, ಹಾಸನ–573201. | ಜಿ.ಎಂ. /3ಎ | ಕೇಂದ್ರ ಕಛೇರಿ, ತಾಂತ್ರಿಕ–3,<br>ಬೆಂಗಳೂರು |
| 2 | ಶ್ರೀ ಭೀಮ ಶಂಕರ್<br>ಶ್ರೀ ಶಂಕರ್ ಕೃಪ<br>ಪ್ಲಾಟ್ ನಂ.109, ಜಿ.ಡಿ.ಎ.ಕಾಲೋನಿ<br>ಗೋಕುಲ್ ನಗರ, ಶಹಬಜಾರ್ ಹತ್ತಿರ,<br>ಗುಲ್ಬರ್ಗಾ–585101. | ಜಿ.ಎಂ. /3ಬಿ | ವಿದ್ಯುತ್ ಪರಿವೀಕ್ಷಕರ ಕಛೇರಿ,<br>ಗುಲ್ಬರ್ಗಾ ಉಪ ವಿಭಾಗ ಗುಲ್ಬರ್ಗಾ |
| 3 | ಶ್ರೀ ಯೋಗೀಶ್ ಜಿ.<br>ನಂ.58/1, 2ನೇ ಮುಖ್ಯರಸ್ತೆ,<br>2ನೇ 'ಎ' ಅಡ್ಡರಸ್ತೆ, ನಾಗೇಂದ್ರ ಬ್ಲಾಕ್,<br>ಬಿ.ಎಸ್.ಕೆ. 3ನೇ ಹಂತ,<br>ಬೆಂಗಳೂರು–560050. | ಜಿ.ಎಂ | ಉಪ ಮುಖ್ಯ ವಿದ್ಯುತ್<br>ಪರಿವೀಕ್ಷಕರ ಕಛೇರಿ ಬೆಂಗಳೂರು<br>ದಕ್ಷಿಣ ಉಪ ವಿಭಾಗ–1 ಕ್ಷೇತ್ರೀಯ |
| 4 | ಶ್ರೀ ಶ್ರೀನಿವಾಸ ಎಸ್.ಕೆ.<br>ಬಿನ್. ಕೆಂದಣ್ಣ,<br>ಸಿದ್ದಾಪುರ, ಬೇವಿನ ಹಳ್ಳಿ ಅಂಚೆ,<br>ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ,<br>ತುಮಕೂರು–572135. | ಜಿ.ಎಂ/ಪ್ರವರ್ಗ–1 | ಉಪ ಮುಖ್ಯ ವಿದ್ಯುತ್<br>ಪರಿವೀಕ್ಷಕರ ಕಛೇರಿ, ಬೆಂಗಳೂರು<br>ಉತ್ತರ, ಬೆಂಗಳೂರು ಹೆಚ್ಚುವರಿ<br>ಉತ್ತರ,<br>ಉಪ ವಿಭಾಗ |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ (ಶ್ರೀಮತಿ / ಶ್ರೀಯುತ) | ಮೀಸಲಾತಿ | ನೇಮಕ ಮಾಡಲಾದ ಸ್ಥಳ |
|---|---|---|---|
| 5 | ಶ್ರೀ ಸತೀಶ್ ಎನ್.,<br>ಕೇರ್‌ಆಫ್ ನರಸಿಂಹಯ್ಯ,<br>ನಂ.1590 'ಸಿ', ರಾಘವೇಂದ್ರ ಸ್ವಾಮಿ ದೇವಸ್ಥಾನದ ಹತ್ತಿರ, ಮಾನಂದವಾಡಿ ರಸ್ತೆ, ಮಹಾದೇವ ಪುರ, ನಾಚೇನಳ್ಳಿ ಪಾಳ್ಯ ಅಂಚೆ,<br>ಮೈಸೂರು–570008.. | ಜಿ.ಎಂ/ಎಸ್.ಸಿ | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ಪೂರ್ವ, ಉಪ ವಿಭಾಗ ಕ್ಷೇತ್ರೀಯ |
| 6 | ಶ್ರೀ ಹರೀಶ್ ಎನ್.<br>ಪೂಜೇನ ಅಗ್ರಹಾರ<br>ಡಿ.ಜಿ. ನಬ್ಬೆ ಅಂಚೆ, ಹೊಸಕೋಟೆ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ,<br>ಬೆಂಗಳೂರು–562114 | ಜಿ.ಎಂ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಚಿಕ್ಕಬಳ್ಳಾಪುರ, ಉಪ ವಿಭಾಗ ಕ್ಷೇತ್ರೀಯ |
| 7 | ಶ್ರೀ ಯಂಕಣ್ಣ,<br>ಕೇರ್ ಆಫ್, ರಾಮೇಗೌಡ,<br>ನಂ.368, 11ನೇ ಮುಖ್ಯರಸ್ತೆ, 12ನೇ ಅಡ್ಡರಸ್ತೆ,<br>'ಇ' ಬ್ಲಾಕ್, ಜೆ.ಪಿ.ನಗರ,<br>ಮೈಸೂರು–570008 | ಜಿ.ಎಂ/ಪ್ರವರ್ಗ–1/ ಗ್ರಾಮೀಣ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ತುಮಕೂರು ಉಪ ವಿಭಾಗ ಕ್ಷೇತ್ರೀಯ |
| 8 | ಶ್ರೀ ನಾಗರಾಜ್,<br>ಬಿನ್. ಸಿದ್ದರಾಮಯ್ಯ ಸ್ವಾಮಿ,<br>ಮನೆ ನಂ.ಎಂಐಜಿ–11,ಕೆ.ಹೆಚ್.ಬಿ. ಕಾಲೋನಿ,<br>ಹಳೆ ಪೊಲೀಸ್ ಕ್ವಾರ್ಟರ್ಸ್ ಎದುರು, ಸೇಡಂ,<br>ಬಸ್ ನಿಲ್ದಾಣ ಹತ್ತಿರ,<br>ಗುಲ್ಬರ್ಗಾ ಜಿಲ್ಲೆ–585222. | ಜಿ.ಎಂ/3ಬಿ/ಕನ್ನಡ ಮಾಧ್ಯಮ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೀದರ್ ಉಪ ವಿಭಾಗ ಕ್ಷೇತ್ರೀಯ |
| 9 | ಶ್ರೀಮತಿ ಶಬ್ರಿನ್ ಆಯಿಶ ತಾಜ್,<br>ಬಿನ್.ಅಬ್ದುಲ್ ಮಜೀದ್,<br>ನಂ.5, ಜಿ–ಬ್ಲಾಕ್, ರೈಟರ್ ಷಾಪ್,<br>ಚಾಂಪಿಯನ್ ರೀಪ್ಸ್, ಕೋಲಾರ ಗೋಲ್ಡ್ ಫೀಲ್ಡ್–563117. | ಜಿ.ಎಂ/ಮಹಿಳಾ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಕೋಲಾರ ಉಪ ವಿಭಾಗ ಕ್ಷೇತ್ರೀಯ |
| 10 | ಶ್ರೀ ವಿಶ್ವನಾಥ್ ಅಂಗಡಿ,<br>ಹಿರೇಕೊಪ್ಪ ಅಂಚೆ, ನರಗುಂದ ತಾಲ್ಲೂಕು, ಗದಗ ಜಿಲ್ಲೆ–582207 | ಜಿ.ಎಂ/ಗ್ರಾಮೀಣ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಗದಗ, ಉಪ ವಿಭಾಗ ಕ್ಷೇತ್ರೀಯ |
| 11 | ಶ್ರೀಮತಿ ಕವಿತ ರಾಣಿ ಎನ್<br>ಬಿನ್. ನಾರಾಯಣ್ ಎಸ್.<br>ಮನೆ. ನಂ.4694, 2ನೇ ಕ್ರಾಸ್,<br>ಶಿವಾಜಿ ರಸ್ತೆ, ಎನ್. ಆರ್. ಮೊಹಲ್ಲಾ,<br>ಮೈಸೂರು–570007. | ಜಿ.ಎಂ/ಮಹಿಳಾ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಚಾಮರಾಜನಗರ ಉಪ ವಿಭಾಗ ಕ್ಷೇತ್ರೀಯ |
| 12 | ಶ್ರೀಮತಿ ನೇತ್ರಾವತಿ ಜಿ.ಎನ್.<br>ಬಿನ್. ಜಿ.ಆರ್. ನಾಗಣ್ಣ,<br>ಮುದಬೆಟ್ಟು ಮಹಾಲಿಂಗೇಶ್ವರ ದೇವಸ್ಥಾನದ ಹತ್ತಿರ, ಕಟಪಡಿ ಅಂಚೆ,<br>ಉಡುಪಿ ಜಿಲ್ಲೆ– 574105. | ಜಿ.ಎಂ/ಮಹಿಳಾ | ವಿದ್ಯುತ್ ಪರಿವೀಕ್ಷಕರ ಕಛೇರಿ, ಉಡುಪಿ ಉಪ ವಿಭಾಗ ಕ್ಷೇತ್ರೀಯ |
| 13 | ಶ್ರೀಮತಿ ರಶ್ಮಿ ಎಂ.ಹನಸಿ,<br>ನಂ.626, 8–ಬಿ ಮುಖ್ಯರಸ್ತೆ, 2ನೇಬ್ಲಾಕ್,<br>3ನೇ ಹಂತ, ಬಸವೇಶ್ವರ ನಗರ,<br>ಬೆಂಗಳೂರು–560079. | ಜಿ.ಎಂ/2ಎ/ ಮಹಿಳಾ | ಕೇಂದ್ರ ಕಛೇರಿ –ಕೈಪಿಡಿ ಬೆಂಗಳೂರು |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ (ಶ್ರೀಮತಿ / ಶ್ರೀಯುತ) | ಮೀಸಲಾತಿ | ನೇಮಕ ಮಾಡಲಾದ ಸ್ಥಳ |
|---|---|---|---|
| 14 | ಶ್ರೀ ವಿಜಯಕುಮಾರ್ ಎಂ.<br>ಬಿನ್.ಮಹೇಶ್ವರಪ್ಪ ಆರ್.ಪಿ.,<br>1ನೇ ಮುಖ್ಯರಸ್ತೆ, ಕನಕ ನಗರ, ಹೊಸ ಬ್ರಿಡ್ಜ್,<br>ಓಲ್ಡ್ ಟೌನ್, ಭದ್ರಾವತಿ ತಾಲ್ಲೂಕು,<br>ಶಿವಮೊಗ್ಗ ಜಿಲ್ಲೆ–577301. | 2ಎ | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ದಕ್ಷಿಣ ಉಪ ವಿಭಾಗ –2 ಕ್ಷೇತ್ರೀಯ |
| 15 | ಶ್ರೀ ವಸಂತಕುಮಾರ್ ಬಿ.ಎನ್.<br>C/O ನಾಗರಾಜು ಹೆಚ್.ಕೆ.,<br>'ಡಿ' ನಂ.3, 4ನೇ ಬ್ಲಾಕ್, ಪೊಲೀಸ್<br>ಕ್ವಾಟ್ರರ್ಸ್, ಆನಂದಗಿರಿ ಎಕ್ಸ್‌ಟೇನ್‌ಷನ್, ಹೆಬ್ಬಾಳ,<br>ಬೆಂಗಳೂರು–560024. | 2ಎ | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ಪೂರ್ವ, ಬೆಂಗಳೂರು ಹೆಚ್ಚುವರಿ ಪೂರ್ವ, ಉಪ ವಿಭಾಗ ಕ್ಷೇತ್ರೀಯ |
| 16 | ಶ್ರೀಮತಿ ಅರ್ಚನ ಎಂ.<br>D/O ಮಂಜುನಾಥ್ ಜೆ.<br>ಮೆಲ್ಲಹಳ್ಳಿ, ವರುಣ ಹೋಬಳಿ, ವಯ ಬನ್ನೂರ್<br>ರಸ್ತೆ, ಮೈಸೂರು ಜಿಲ್ಲೆ–570010. | 3ಎ/ಮಹಿಳಾ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಮಂಡ್ಯ ಉಪ ವಿಭಾಗ, ಕ್ಷೇತ್ರೀಯ |
| 17 | ಶ್ರೀ ಚೇತನ್ ಡಿ.ಎಸ್.<br>ಬಿನ್. ಶರಣಪ್ಪ.ಕೆ,<br>"ನವಚೇತನ ನಿಲಯ",<br>ಜಟ್‌ಪಟ್ ನಗರ್ ಸರ್ಕಲ್, ಚಿತ್ರದುರ್ಗ ಜಿಲ್ಲೆ,<br>ಚಿತ್ರದುರ್ಗ–577501. | ಎಸ್.ಸಿ | ವಿದ್ಯುತ್ ಪರಿವೀಕ್ಷಕರ ಕಛೇರಿ, ದಾವಣಗೆರೆ ಉಪ ವಿಭಾಗ, ಕ್ಷೇತ್ರೀಯ |
| 18 | ಶ್ರೀ ಧರ್ಮ ರೆಡ್ಡಿ ಕೆ.<br>C/O ಸುಬ್ಬರಾಯಡು ಸಿ.,<br>ನಂ.18/ಬಿ, 25ನೇ ವಾರ್ಡ್,<br>ಇನ್‌ಫೆಂಟ್ರಿ ರಸ್ತೆ, ಇನ್ನ ರೆಡ್ಡಿ ಬಡಾವಣೆ,<br>ವಾಸವಿ ಸ್ಕೂಲ್ಕ್ ಹತ್ತಿರ, ಬಳ್ಳಾರಿ– 583104. | ಜಿ.ಎಂ/3ಎ/ಗ್ರಾಮೀಣ | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬಳ್ಳಾರಿ ಉಪ ವಿಭಾಗ–1 ಕ್ಷೇತ್ರೀಯ |
| 19 | ಶ್ರೀ ಮನೋಜ್ ಎಂ.<br>S/O ಮರಿಸ್ವಾಮಿ ಕೆ.<br>ನಂ.557, 2ನೇ ಮುಖ್ಯರಸ್ತೆ, 5ನೇ ಅಡ್ಡರಸ್ತೆ,<br>ವಿಜಯನಗರ 1ನೇ ಹಂತ,<br>ಮೈಸೂರು – 570017. | ಎಸ್.ಸಿ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಮಡಿಕೇರಿ, ಉಪ ವಿಭಾಗ ಕ್ಷೇತ್ರಿಯ |
| 20 | ಶ್ರೀಮತಿ ರಬಿಯಾ ನದಾಫ್,<br>D/O ಎಂ.ಪಿ. ನಾದಫ್, ಹೌಸ್ ನಂ:20/4,<br>ಕೇರಿಕೆಲ್‌ಜಿನ್ ಓಣಿ,<br>ಜೂ ಬಾಯಿ ಚಲ್ ಗಾಂಧಿ ಚೌಕ್,<br>ಶಿವಾಜಿ ರಸ್ತೆ, ಧಾರವಾಡ – 580001. | ಪ್ರವರ್ಗ–1/ಮಹಿಳಾ | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಮಂಗಳೂರು ಉಪ ವಿಭಾಗ ಕ್ಷೇತ್ರೀಯ |
| 21 | ಶ್ರೀಮತಿ ಮುಕ್ತಾಂಬ ಬಿ.ಎಸ್.<br>D/O ಸಿದ್ದಲಿಂಗಯ್ಯ,<br>ಡಿ.ನಂ. 500, 10ನೇ ಮುಖ್ಯ ರಸ್ತೆ,<br>ಎಂ.ಸಿ.ಲೇಔಟ್, ವಿಜಯನಗರ,<br>ಬೆಂಗಳೂರು – 560040. | 2ಎ/ಮಹಿಳಾ | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ಉತ್ತರ, ಬೆಂಗಳೂರು ಪಶ್ಚಿಮ ಉಪ ವಿಭಾಗ |
| 22 | ಶ್ರೀಮತಿ ಸಂಗೀತ ಎನ್.<br>D/O ಎಂ. ನಂಜುಂಡ ಸ್ವಾಮಿ,<br>'ಶ್ರೀ ಸಾಯಿ ಕೃಪಾ ನಂ.'176, 2ನೇ ಹಂತ,<br>3ನೇ ಬ್ಲಾಕ್, 'ಎಫ್' ಅಡ್ಡ ರಸ್ತೆ, ನಾಗರಬಾವಿ,<br>ಬೆಂಗಳೂರು –560072. | ಎಸ್.ಸಿ/ಮಹಿಳಾ | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ಪೂರ್ವ, ಬೆಂಗಳೂರು ಕೇಂದ್ರೀಯ ಉಪ ವಿಭಾಗ ಕ್ಷೇತ್ರೀಯ |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ (ಶ್ರೀಮತಿ / ಶ್ರೀಯುತ) | ಮೀಸಲಾತಿ | ನೇಮಕ ಮಾಡಲಾದ ಸ್ಥಳ |
|---|---|---|---|
| 23 | ಶ್ರೀ ಶಂಕರಗೌಡ ಪಾಟೀಲ್,<br>S/O ಶಿವನಂದ ಎಲ್. ಪಾಟೀಲ್,<br>ಕೃಷ್ಣ –ಕಿತ್ತೂರು ಅಂಚೆ, ಅಥಣಿ ತಾಲ್ಲೂಕು,<br>ಬೆಳಗಾಂ ಜಿಲ್ಲೆ–591303. | 3ಬಿ | ಸಹಾಯಕ ವಿದ್ಯುತ್ ಪರಿವೀಕ್ಷಕರು, ಘಟಪ್ರಭ (ಸ್ವತಂತ್ರ) ಕ್ಷೇತ್ರೀಯ |
| 24 | ಶ್ರೀ ರಾಜೇಶ ಬಿ.ವೈ.,<br>S/O ಯೋಗೇಂದ್ರಪ್ಪ ಎಂ.,<br>ಉಪಧ್ಯಾಯ, ಬೆಳ್ಳೂರು ಹಳ್ಳಿ ಅಂಚೆ,<br>ಮಾರ್ಗ ರಿಪ್ಪನ್ ಪೇಟೆ, ಹೊಸನಗರ ತಾಲ್ಲೂಕು,<br>ಶಿವಮೊಗ್ಗ ಜಿಲ್ಲೆ –577426. | 2ಎ/ಗ್ರಾಮೀಣ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಸಿರಸಿ ಉಪ ವಿಭಾಗ ಕ್ಷೇತ್ರೀಯ |
| 25 | ಶ್ರೀಮತಿ ರಾಧ ಜಿ.<br>C/O ಸರೋಜಮ್ಮ,<br>ಹೊಸಹಳ್ಳಿ, ರೆಫೆರಲ್ ಆಸ್ಪತ್ರೆ, ಕ್ವಾಟ್ರರ್ಸ್,<br>ಎಂ.ಸಿ. ಲೇಔಟ್, ವಿಜಯನಗರ,<br>ಬೆಂಗಳೂರು – 560040. | ಎಸ್.ಟಿ/ಮಹಿಳಾ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಹಾವೇರಿ, ಉಪ ವಿಭಾಗ ಕ್ಷೇತ್ರೀಯ |
| 26 | ಶ್ರೀ ಮುನಿರಾಜ ವೈ.,<br>S/O ಯಲ್ಲಪ್ಪ,<br>ಪುರಹಳ್ಳಿ ವೇಮಗಲ್ ಅಂಚೆ,<br>ಕೋಲಾರ ತಾಲ್ಲೂಕು,<br>ಕೋಲಾರ ಜಿಲ್ಲೆ –563157. | ಎಸ್.ಸಿ/ಗ್ರಾಮೀಣ | ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಕೊಪ್ಪಳ ಉಪ ವಿಭಾಗ ಕ್ಷೇತ್ರೀಯ |
| 27 | ಶ್ರೀಮತಿ ಯಲ್ವಿ ರೇಣುಕಾ,<br>C/O ಕೆ. ಗುರುರಾಜ್, (ಜೆ.ಇ)<br>ಹೆಚ್.ನಂ. 1–12–75/43, ಪಿ.ಸಿ.ಬಿ.ಕಾಲೋನಿ,<br>ದಡ್ಡಿ ಕಾಲೋನಿ,<br>ಹಿಂದುಗಡೆ, ರಾಯಚೂರು – 584101. | 3ಬಿ/ಮಹಿಳಾ | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬಳ್ಳಾರಿ ಉಪ ವಿಭಾಗ ಬಳ್ಳಾರಿ |
| 28 | ಶ್ರೀ ನಾಗರಾಜು,<br>S/O ಕೆಂಪಯ್ಯ,<br>ಶಕುನಿ ತಿಮ್ಮನಹಳ್ಳಿ, ಕೊಡ್ಲಹಳ್ಳಿ ಅಂಚೆ,<br>ಕೊರಟಗೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ – 572121. | 2ಎ/ಗ್ರಾಮೀಣ | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ದಕ್ಷಿಣ, ಬೆಂಗಳೂರು ಹೆಚ್ಚುವರಿ ದಕ್ಷಿಣ, ಉಪ ವಿಭಾಗ –1 ಕ್ಷೇತ್ರೀಯ |
| 29 | ಶ್ರೀಮತಿ ಶಫಿಯಾ ತಾಬ್ಸಮ್,<br>ನಂ. 227, 11ನೇ ಮುಖ್ಯ ರಸ್ತೆ,<br>3ನೇ ಅಡ್ಡ ರಸ್ತೆ, ಬನ್ನಿ ಮಂಟಪ,<br>'ಬಿ' ಲೇಔಟ್, ಸಿದ್ದಿಖ್ ಮೊಹಲ್ಲಾ,<br>ಮೈಸೂರು – 570015. | 2ಬಿ/ಮಹಿಳಾ | ಕೇಂದ್ರ ಕಛೇರಿ, ತಾಂತ್ರಿಕ–1 ಕಛೇರಿ, ಬೆಂಗಳೂರು |
| 30 | ಶ್ರೀ ಶಿವಶರಣಪ್ಪ ಪಾಟೀಲ್,<br>C/O ಎಂ.ಟಿ. ಕುಂಬಾರ್,<br>ನಂ.1923, ಕಲ್ಯಾಣ ನಗರ, ಪಿಡಬ್ಲ್ಯೂಡಿ, ಕಛೇರಿ<br>ಹಿಂದೆ ಸಿಂಧಗಿ ಅಂಚೆ,<br>ಬಿಜಾಪುರ ಜಿಲ್ಲೆ – 586128. | ಜಿ.ಎಂ/ಎಕ್ಸ್ಎಂಪಿ | ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಳಗಾಂ, ಉಪ ವಿಭಾಗ ಬೆಳಗಾಂ |

ಈ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಿಂದ 15 (ಹದಿನೈದು ದಿನಗಳು ಮಾತ್ರ) ದಿನಗಳೊಳಗಾಗಿ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಜಾತಮ್ಮ**

ಪೀಠಾಧಿಕಾರಿ, ಇಂಧನ ಇಲಾಖೆ.

**ಅನುಬಂಧ**

**ಅಧಿಸೂಚನೆ ಸಂಖ್ಯೆ: ಇಎನ್ 42 ಇಬಿಎಸ್ 2009, ದಿನಾಂಕ: 09.10.2009 ಕ್ಕೆ**

**ಷರತ್ತು ಮತ್ತು ನಿಬಂಧನೆಗಳು**

1. ಈ ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳ ಆಯ್ಕೆಯು ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.
2. ಅಭ್ಯರ್ಥಿಗಳ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಾವಳಿಯ ಅಥವಾ ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
3. ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿ 1977 ಕ್ಕೆ ಬದ್ಧರಾಗಿರುತ್ತಾರೆ.
4. ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ) 1974ರ ನಿಯಮಾವಳಿಯಲ್ಲಿ ಮೇಲ್ಕಂಡ ಹುದ್ದೆಗೆ ನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು.
5. ಅಭ್ಯರ್ಥಿಗಳ ಜೇಷ್ಠತೆಯನ್ನು ಕರ್ನಾಟಕ ಲೋಕಸೇವಾ ಆಯೋಗದ ಪಟ್ಟಿಯಲ್ಲಿ ರೂಪಿಸಿರುವ ಕ್ರಮ ಸಂಖ್ಯೆಯಂತೆ ಹಾಗೂ ಸರ್ಕಾರ ಆಗಿಂದಾಗ್ಗೆ ಹೊರಡಿಸುವ ಆದೇಶಗಳ ಅನ್ವಯ ನಿರ್ಧರಿಸಲಾಗುವುದು.
6. ಮೇಲಿನ ಅಧಿಸೂಚನೆಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳು ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ವಿದ್ಯುತ್ ಪರಿವೀಕ್ಷಣಾಲಯ ಇಲಾಖೆ, ಮೈಶುಗರ್ ಕಟ್ಟಡ, ನೆಲಮಹಡಿ, ಜೆ.ಸಿ.ರಸ್ತೆ, ಬೆಂಗಳೂರು–560002. ಇಲ್ಲಿ ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅವರುಗಳ ಮೂಲ ಅಂಕಪಟ್ಟಿ, ಪದವಿ ಪ್ರಮಾಣ ಪತ್ರ, ಜನ್ಮ ದಿನಾಂಕ ಹಾಗೂ ಇತರೆ ಮೂಲ ಪ್ರಮಾಣ ಪತ್ರಗಳನ್ನು ಪರಿಶೋಧನೆಗೆ ಹಾಜರುಪಡಿಸತಕ್ಕದ್ದು. ಅಲ್ಲದೆ ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರಗಳನ್ನು ಹಾಜರುಪಡಿಸಬೇಕು.

**ಸುಜಾತಮ್ಮ**

ಪಿ.ಆರ್. 903 ಪೀಠಾಧಿಕಾರಿ, ಇಂಧನ ಇಲಾಖೆ.

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ,**

**ನಂ. 720, ಶಿಂಷಾ ಭವನ 46ನೇ ಅಡ್ಡರಸ್ತೆ, 8ನೇ ಬ್ಲಾಕ್ ಜಯನಗರ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ: EST 2–315/06–07, ದಿನಾಂಕ: 1ನೇ ಅಕ್ಟೋಬರ್ 2009**

**ವಿಷಯ:** ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾದ ಅಭ್ಯರ್ಥಿಗಳನ್ನು ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ನೇಮಕ ಮಾಡುವ ಕುರಿತು.

**ಉಲ್ಲೇಖ:** ಕಾರ್ಯದರ್ಶಿಯವರು, ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು ಅವರ ಪತ್ರ ಸಂಖ್ಯೆ: ಇ(2)–24–91/2009–10/ಪಿಎಸ್‌ಸಿ/ ದಿನಾಂಕ: 07.05.2009.

ಕರ್ನಾಟಕ ಲೋಕಸೇವಾ ಆಯೋಗದಿಂದ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಆಯ್ಕೆಗಾಗಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಉಲ್ಲೇಖದನ್ವಯ ಹಂಚಿಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 4(i) ರನ್ವಯ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ತಾತ್ಕಾಲಿಕವಾಗಿ ಪ್ರಥಮ ದರ್ಜೆ ಸಹಾಯಕರಾಗಿ ವೇತನ ಶ್ರೇಣಿ ರೂ. 7275–175–7800–200–8600–225–9500–250–10500–300–12300–350–13350 ರಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ನೇಮಕ ಮಾಡಿ ಇವರುಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗಳಿಗೆ ಸ್ಥಳ ನಿಯುಕ್ತಿ ಮಾಡಿ ಆದೇಶ ನೀಡಲಾಗಿದೆ.

| ಕ್ರ. ಸಂ. | ಹೆಸರು ಮತ್ತು ವಿಳಾಸ ಶ್ರೀ / ಶ್ರೀಮತಿ | KPSC ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ಪ್ರಥಮ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ ಕಛೇರಿ |
|---|---|---|---|
| 1. | BASEER AHMED C/O MUJEER AHAMED KHAN # 2700-1, II CROSS, AGRAHARA STREET, BAHARPET, HASSAN-573201. | 1 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |
| 2. | CHENNIGARAJU B.H. # 380/1, 6TH MAIN 1ST BLOCK, PEENYA, BANGALORE-560058. | 2 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |

| ಕ್ರ. ಸಂ. | ಹೆಸರು ಮತ್ತು ವಿಳಾಸ ಶ್ರೀ / ಶ್ರೀಮತಿ | KPSC ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ಪ್ರಥಮ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ ಕಛೇರಿ |
|---|---|---|---|
| 3. | KISHORE KUMAR H.S<br>INDUVALLI VILLAGE, SHIGGA POST,<br>SORABA TQ., SHIMOGA-577434 | 3 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |
| 4. | BYRAREDDY<br>KODIHALLI VILLAGE, ANOOR POST,<br>CHINTAMANI TQ,<br>CHICKABALLAPURA-563125 | 4 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |
| 5. | RAJESHWARI HEGDE<br>POST HOSAKULI, T: BOLTATTE TQ:<br>HONNAVARA<br>UTTARAKANNADA – 581334 | 5 | ಜಿಲ್ಲಾ ನೋಂದಣಿ ಕಛೇರಿ, ಗುಲ್ಬರ್ಗಾ |
| 6. | MENAKA H.R<br>MANAGALA VILLAGE & POST<br>MANDYA – 571403 | 6 | ಉಪ ನೋಂದಣಿ ಕಛೇರಿ, ಮದ್ದೂರು |
| 7. | ANNAPPA .M<br>C.N. BUILDING<br>1ST MAIN, 1ST CROSS, J.C. EXTN<br>HARIHARA – 577601 | 7 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |
| 8. | LOLAKSHI D.S<br>GOVERNMENT HIGH SCHOOL,<br>BASAVAGHATTA AT (POT) DUDDA<br>HOBLI, HASSAN TQ | 8 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |
| 9. | KAPPATTAPPA'S HANCHINAL AT<br>NARAYANAPUR POST KOTUMACHAGI<br>GADAG – 582129 | 9 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |
| 10. | SURESH KRISHNAPPA JALARADDI<br>MIG-1-46, GANDHINAGAR,<br>GOKUL ROAD, HUBLI-580020 | 10 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |
| 11. | SIDRAM NAGATHAN JAI NAGAR, BLDE<br>ROAD, NEAR MALLIKARJUNA<br>ASHRAM, BIJAPUR – 586103 | 11 | ಉಪ ನೋಂದಣಿ ಕಛೇರಿ, ಸಿಂಧಗಿ |
| 12. | SADASHIVA S. DABBAGOL GADDE<br>PLOT, ANKALI ROAD, RAIBAG TQ<br>BELGAUM-591317 | 12 | ಜಿಲ್ಲಾ ನೋಂದಣಿ ಕಛೇರಿ, ಬೀದರ್ |
| 13. | RAJENDRA PRASAD H.N.<br>HADINARU VILLAGE AND POST<br>NANJANNAGUD TQ MYSORE-571301 | 13 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |
| 14. | GOVINDAMMA M.A.<br>MULAHALLI, VELAGALBURRE (POST)<br>KOLAR TQ – 563126 | 14 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |

| ಕ್ರ. ಸಂ. | ಹೆಸರು ಮತ್ತು ವಿಳಾಸ ಶ್ರೀ / ಶ್ರೀಮತಿ | KPSC ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ಪ್ರಥಮ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ ಕಛೇರಿ |
|---|---|---|---|
| 15. | RENUKA IRAPPA VAKKUND AT:POST: DODAWAD BAILAHONGALA TQ BELAGAVI-591104 | 15 | ಜಿಲ್ಲಾ ನೋಂದಣಿ ಕಛೇರಿ, ಬೆಳಗಾವಿ |
| 16. | YASHODHA B.R. T. BEGUR VILLAGE AND POST NELAMANGALA TQ BANGALORE RURAL – 562123 | 16 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |
| 17. | RANJANA HOSE NO. 10/129, AMBEDKAR COLONOY WADI (JN) POST, CHITTAPURA TQ GULBARGA-585225 | 17 | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಬೆಂಗಳೂರು |

ಈ ನೇಮಕಾತಿಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ದರಾಗಿರತಕ್ಕದ್ದು.

1) ಈ ನೇಮಕಾತಿಯು ಅಭ್ಯರ್ಥಿಗಳ ಆಯ್ಕೆ ಪಟ್ಟಿಗೆ ಸಂಬಂಧಿಸಿದಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ: (ಸಿವಿಲ್) 232/1999 ರ ಅರ್ಜಿಯಲ್ಲಿ ಆಗುವ ಘನ ನ್ಯಾಯಾಲಯದ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ. ಹಾಗೂ ಅಭ್ಯರ್ಥಿಗಳು ಸದರಿ ಘನ ನ್ಯಾಯಾಲಯಗಳು ನೀಡುವ ತೀರ್ಪಿಗೆ ಬದ್ಧರಾಗಿರತಕ್ಕದ್ದು.
2) ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಪರೀಕ್ಷಾರ್ಥ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಎಲ್ಲಾ ಅಭ್ಯರ್ಥಿಗಳು ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿರುವ (1) ಕನ್ನಡ ಭಾಷಾ ಪರೀಕ್ಷೆ (2) ಅಕೌಂಟ್ಸ್ ಹೈಯರ್ (3) ರಿಜಿಸ್ಟ್ರೇಷನ್ 4) ಜನರಲ್ ಲಾ ಭಾಗ–1 ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರತಕ್ಕದ್ದು. ಇದಕ್ಕೆ ತಪ್ಪಿದಲ್ಲಿ KCS (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
3) ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ಮೇಲೆ (1) ನಿಗದಿತ ನಮೂನೆಯಲ್ಲಿ ಆಸ್ತಿ ವಿವರಣಾ ಪಟ್ಟಿಯನ್ನು ಮತ್ತು (2) ಇಬ್ಬರು ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರವನ್ನು ಸಲ್ಲಿಸಿದ ನಂತರ ಸರ್ಕಾರಿ ಆದೇಶ ಸಂಖ್ಯೆ: JAD/37/SRR/74 ದಿನಾಂಕ: 05.08.1974ರನ್ವಯ ಪ್ರಥಮ ವೇತನ ಪ್ರಮಾಣ ಪತ್ರವನ್ನು ನೀಡಲಾಗುವುದು.
4) ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾಗುವ ಮುನ್ನ ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ಪ್ರತಿಜ್ಞೆ ಮಾಡಿದ ನಿಷ್ಠೆ ಪ್ರಮಾಣ ಪತ್ರವನ್ನು ಬರೆದುಕೊಡತಕ್ಕದ್ದು.
5) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: FD 65 SRR 67 ದಿನಾಂಕ: 22.06.1967ರನ್ವಯ ವೈದ್ಯಕೀಯ ಪ್ರಮಾಣ ಪತ್ರವನ್ನು ಜಿಲ್ಲಾ ಸರ್ಜನ್ ಅವರಿಂದ ಪಡೆದು ಹಾಜರುಪಡಿಸತಕ್ಕದ್ದು.
6) ಸರ್ಕಾರದವರು ತಮ್ಮ ಆದೇಶ ಸಂಖ್ಯೆ: FD (SPL) 04 PET 2005 ದಿನಾಂಕ: 31.03.2006ರಲ್ಲಿ ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಯ ಬದಲಾಗಿ ದಿನಾಂಕ: 01.04.2006 ರಿಂದ ಜಾರಿಗೆ ಬರುವಂತೆ ಹೊಸದಾಗಿ New Defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ: 01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆಂದು ಆದೇಶ ಮಾಡಿರುತ್ತಾರೆ.

   ಆದ್ದರಿಂದ ಈ ಇಲಾಖೆಯಲ್ಲಿ ನೇಮಕ ಹೊಂದಿದ ಈ ಅಭ್ಯರ್ಥಿಗಳೆಲ್ಲರೂ ಸರ್ಕಾರದ ಸದರಿ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ. ಹಾಗೂ ಸದರಿ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ಎಲ್ಲಾ ಅಭ್ಯರ್ಥಿಗಳು ಬದ್ದರಾಗಿರತಕ್ಕದ್ದು.
7) ಅಭ್ಯರ್ಥಿಗಳು ಈ ನೇಮಕಾತಿ ಆದೇಶ ಮುಟ್ಟಿದ 15 ದಿವಸಗಳಲ್ಲಿ ನೇಮಕಾತಿ ಮಾಡಿದ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅವರ ನೇಮಕಾತಿ ಆದೇಶವನ್ನು ನಿಯಮಾನುಸಾರ ರದ್ದುಪಡಿಸಲಾಗುವುದು. ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನು ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

**ಕೆ.ಎನ್. ಉತ್ತಯ್ಯ**

ಪಿ.ಆರ್. 867 ನೋಂದಣಿ ಉಪ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು), ಬೆಂಗಳೂರು

**ಮುದ್ರಾಂಕ ಮತ್ತು ನೋಂದಣಿ ಇಲಾಖೆ**

**ಜಿಲ್ಲಾ ನೋಂದಣಾಧಿಕಾರಿಗಳ ಕಾರ್ಯಾಲಯ, ಕೊಪ್ಪಳ**

**ಅಧಿಕೃತ ಜ್ಞಾಪನ**

**ಸಂಖ್ಯೆ:ಜಿ.ನೋ.ಕೊ/ಸಿಬ್ಬಂದಿ/2009–10, 611–618, ದಿನಾಂಕ: 7ನೇ ಅಕ್ಟೋಬರ್ 2009**

**ವಿಷಯ:** ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾದ ಅಭ್ಯರ್ಥಿಗಳನ್ನು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ನೇಮಕ ಮಾಡುವ ಕುರಿತು.

**ಉಲ್ಲೇಖ:** 1. ಕಾರ್ಯದರ್ಶಿಗಳು ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು ಇವರ ಪತ್ರದ ಸಂಖ್ಯೆ:ಇ(3) 764–823/09–10/PSC ದಿನಾಂಕ: 25.07.2009/3.08.2009

2. ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಪತ್ರದ ಸಂಖ್ಯೆ:ಸಿಬ್ಬಂದಿ2–144/05–06 ದಿನಾಂಕ: 24.08.2009.

ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು ಇವರಿಂದ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ಆಯ್ಕೆಯಾಗಿ ಉಲ್ಲೇಖಿತ ಪತ್ರ (2) ರನ್ವಯ ಈ ಜಿಲ್ಲೆಗೆ ಹಂಚಿಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 4(1) ರನ್ವಯ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರಾಗಿ ವೇತನ ಶ್ರೇಣಿ ರೂ. 5800–10500 ರಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ನೇಮಕ ಮಾಡಿ ಇವರನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ಸ್ಥಳ ನಿಯುಕ್ತಿ ಆದೇಶ ನೀಡಲಾಗಿದೆ.

| ಕ್ರ. ಸಂ. | ಹೆಸರು ಮತ್ತು ವಿಳಾಸ ಶ್ರೀ / ಶ್ರೀಮತಿ | KPSC ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ ಕಛೇರಿ |
|---|---|---|---|
| 1. | ಕುಮಾರಿ ರೇವಮ್ಮ ಶಿವಣಗಿ ಸಾ: ಹೋರ್ತಿ, ತಾ: ಇಂಡಿ, ಜಿ: ಬಿಜಾಪುರ | 29 | ಉಪ ನೋಂದಣಿ ಕಛೇರಿ, ಕುಷ್ಟಗಿ |

ಈ ನೇಮಕಾತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಯು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ಅಭ್ಯರ್ಥಿಗಳ ಆಯ್ಕೆ ಪಟ್ಟಿಗೆ ಸಂಬಂಧಿಸಿದಂತೆ ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99ರ ಅರ್ಜಿಯಲ್ಲಿ ಆಗುವ ಘನ ನ್ಯಾಯಾಲಯದ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ ಹಾಗೂ ಅಭ್ಯರ್ಥಿಗಳು ಸದರಿ ಘನ ನ್ಯಾಯಾಲಯವು ನೀಡುವ ತೀರ್ಪಿಗೆ ಬದ್ದರಾಗಿರತಕ್ಕದ್ದು.
2. ಅಭ್ಯರ್ಥಿಗಳ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಪರೀಕ್ಷಾರ್ಥ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಎಲ್ಲಾ ಅಭ್ಯರ್ಥಿಗಳು ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿರುವ 1) ಕನ್ನಡ ಭಾಷಾ ಪರೀಕ್ಷೆ 2) ಅಕೌಂಟ್ಸ್ ಲೋಯರ್ 3) ರಿಜಿಸ್ಟ್ರೇಷನ್ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
3. ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ಮೇಲೆ 1) ನಿಗದಿತ ನಮೂನೆಯಲ್ಲಿ ಆಸ್ತಿ ವಿವರಣಾ ಪಟ್ಟಿಯನ್ನು ಮತ್ತು 2) ಇಬ್ಬರು ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸಿದ ನಂತರ ಸರ್ಕಾರಿ ಆದೇಶ ಸಂಖ್ಯೆ: ಜೆಎಡಿ/37/SRR/74 ದಿನಾಂಕ:05.08.1974 ರನ್ವಯ ಪ್ರಥಮ ವೇತನ ಪ್ರಮಾಣ ಪತ್ರವನ್ನು ನೀಡಲಾಗುವುದು.
4. ಅಭ್ಯರ್ಥಿಗಳು ಯಾವುದೇ ಉದ್ಯೋಗ ವಿನಿಮಯ ಕೇಂದ್ರದಲ್ಲಿ ತಮ್ಮ ಹೆಸರನ್ನು ನೋಂದಾಯಿಸಿದ್ದಲ್ಲಿ ಅದರ ನೋಂದಣಿ ಪತ್ರವನ್ನು ಅಥವಾ ನೋಂದಣಿ ಮಾಡಿಸದೇ ಇದ್ದಲ್ಲಿ ನೋಂದಣಿ ಮಾಡಿಸಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರವನ್ನು ಪಡೆದು ಅದನ್ನು ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಸುಬ್ಬಯ್ಯ ವೃತ್ತ ಬೆಂಗಳೂರು–27 ಇವರಿಗೆ ತಪ್ಪದೇ ಕಳುಹಿಸಿ ಮಾಹಿತಿಯನ್ನು ಈ ಕಛೇರಿಗೆ ನೀಡುವುದು.
5. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾಗುವ ಮುನ್ನ ಭಾರತದ ಸಂವಿಧಾನಕ್ಕೆ ಬದ್ದರಾಗಿರುವ ಬಗ್ಗೆ ಪ್ರತಿಜ್ಞೆ ಮಾಡಿದ ನಿಷ್ಠೆ ಪ್ರಮಾಣ ಪತ್ರವನ್ನು ಬರೆದು ಕೊಡತಕ್ಕದ್ದು.

6. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: FD 65/SRR 67 ದಿನಾಂಕ: 22.06.1967 ರನ್ವಯ ವೈದ್ಯಕೀಯ ಪ್ರಮಾಣ ಪತ್ರವನ್ನು ಜಿಲ್ಲಾ ಸರ್ಜನ್‌ರಿಂದ ಪಡೆದು ಹಾಜರ್‌ಪಡಿಸತಕ್ಕದ್ದು.
7. ಸರ್ಕಾರದವರು ತಮ್ಮ ಆದೇಶ ಸಂಖ್ಯೆ: FD (SPL) 04 PET 2005 ದಿನಾಂಕ: 31.03.2006 ರಲ್ಲಿ ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಯ ಬದಲಾಗಿ ದಿನಾಂಕ: 01.04.2006 ರಿಂದ ಜಾರಿಗೆ ಬರುವಂತೆ ಹೊಸದಾಗಿ New Defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ:01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆಂದು ಆದೇಶ ಮಾಡಿರುತ್ತಾರೆ.

   ಆದ್ದರಿಂದ ಈ ಇಲಾಖೆಯಲ್ಲಿ ನೇಮಕ ಹೊಂದಿದ ಈ ಅಭ್ಯರ್ಥಿಗಳೆಲ್ಲರೂ ಸರ್ಕಾರದ ಸದರಿ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ಸದರಿ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ಎಲ್ಲಾ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು.
8. ಅಭ್ಯರ್ಥಿಗಳು ಈ ನೇಮಕಾತಿ ಆದೇಶ ಮುಟ್ಟಿದ ಹದಿನೈದು ದಿವಸಗಳಲ್ಲಿ ನೇಮಕಾತಿ ಮಾಡಿದ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು ಇದಕ್ಕೆ ತಪ್ಪಿದಲ್ಲಿ ಅವರ ನೇಮಕಾತಿಯ ಆದೇಶವನ್ನು ನಿಯಮಾನುಸಾರ ರದ್ದುಪಡಿಸಲಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನು ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
9. ನೇಮಕಾತಿ ಮಾಡಿರುವ ಕಛೇರಿಯ ಮಾರ್ಪಾಡಿಗೆ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕೂ ಪುರಸ್ಕರಿಸಲಾಗುವುದಿಲ್ಲ.
10. ಇಲಾಖೆ ನಿಯಮಿಸಿರುವ ಪರೀಕ್ಷಾರ್ಥ ಅವಧಿಯ ತರಬೇತಿ ಕಾರ್ಯಕ್ರಮವನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿದಲ್ಲಿ ಮಾತ್ರ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವೆಂದು ಪರಿಗಣಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಕೊಪ್ಪಳ ಜಿಲ್ಲೆ, ಕೊಪ್ಪಳ

ಪಿ.ಆರ್. 890

**ಆಯುಕ್ತರ ಕಛೇರಿ,**

**ಉದ್ಯೋಗ ಮತ್ತು ತರಬೇತಿ ಇಲಾಖೆ, ಕೌಶಲ್ಯ ಭವನ. ಡೈರಿ ಸರ್ಕಲ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು–560 029**

**ಅಧಿಸೂಚನೆ**

**ಸಂ: ಉತಇ/ತರಬೇತಿ/ಖರೀದಿ–5/ವಿಲೇ–ವಿವ–09/2009–10, ದಿನಾಂಕ: 12ನೇ ಅಕ್ಟೋಬರ್ 2009**

**ವಿಷಯ:** ಉದ್ಯೋಗ ಮತ್ತು ತರಬೇತಿ ಇಲಾಖೆಯ ಪರೀಕ್ಷಾ ವಿಭಾಗದಲ್ಲಿರುವ ಹಳೆಯ ಪರೀಕ್ಷಾ ಅರ್ಜಿಗಳು ಹಾಗೂ ಹಳೆಯ ಉತ್ತರ ಪತ್ರಿಕೆಗಳ ಬಹಿರಂಗ ಹರಾಜಿನ ಬಗ್ಗೆ.

ಉದ್ಯೋಗ ಮತ್ತು ತರಬೇತಿ ಇಲಾಖೆಯ ಪರೀಕ್ಷಾ ವಿಭಾಗದಲ್ಲಿರುವ ಅನುಪಯುಕ್ತವೆಂದು ಧೃಡೀಕರಿಸಲ್ಪಟ್ಟಿರುವ ಹಳೆಯ ಪರೀಕ್ಷೆ ಅರ್ಜಿಗಳು ಹಾಗೂ ಹಳೆಯ ಉತ್ತರ ಪತ್ರಿಕೆ (ಸುಮಾರು 130 ಮೂಟೆ) ಗಳನ್ನು ದಿನಾಂಕ: 21–11–2009 ಬೆಳಿಗ್ಗೆ 11 ಘಂಟೆಗೆ ಕೇಂದ್ರ ಕಛೇರಿಯ ಆವರಣದಲ್ಲಿ ಸಾರ್ವಜನಿಕ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲಾಗುವುದು.

ಸದರಿ ಅನುಪಯುಕ್ತ ಸಾಮಗ್ರಿಗಳನ್ನು ಕೊಂಡುಕೊಳ್ಳಲು ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ನಿಗದಿಪಡಿಸಿದ ಹರಾಜಿನ ದಿನಾಂಕದಂದು ನಿಗದಿತ ವೇಳೆಯ ಅರ್ಧ ಘಂಟೆ ಮೊದಲು ತಮ್ಮ ಹೆಸರು, ವಿಳಾಸದೊಂದಿಗೆ ಮುಂಗಡ ಠೇವಣಿ ರೂ.2000/– (ರೂಪಾಯಿ ಎರಡು ಸಾವಿರ ಮಾತ್ರ) ಗಳನ್ನು ಪಾವತಿಸಿ ನೊಂದಾಯಿಸಿಕೊಳ್ಳಬೇಕು. ಹರಾಜಿಗೆ ಒಳಪಟ್ಟ ಅನುಪಯುಕ್ತ ವಸ್ತುಗಳನ್ನು ಈ ಕಛೇರಿಯ ವೇಳೆಯಲ್ಲಿ ನೋಡಲು ಅವಕಾಶವಿರುತ್ತದೆ.

ಈ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಬೆಲೆ ಸೂಚಿಸಿದ ಯಶಸ್ವಿ ಬಿಡ್‌ದಾರರಿಗೆ ಆಯುಕ್ತರ ಒಪ್ಪಿಗೆ ಪಡೆದ ತಕ್ಷಣ ನಿರುಪಯುಕ್ತ ವಸ್ತುಗಳನ್ನು ವಿಲೇವಾರಿ ಮಾಡಲಾಗುವುದು. ಯಶಸ್ವಿ ಬಿಡ್‌ದಾರರು ಬಿಡ್‌ನ ಮೊತ್ತದ ಶೇ.25 ರಷ್ಟು ಹಣವನ್ನು ಸ್ಥಳದಲ್ಲೇ ಪಾವತಿಸಬೇಕಾಗುತ್ತದೆ. ಬಿಡ್‌ದಾರರು ಅವರ ಸ್ವಂತ ಖರ್ಚಿನಿಂದ ಆದೇಶ ಪಡೆದ 7 ದಿನಗಳೊಳಗೆ ಹರಾಜಿನ ಸಾಮಗ್ರಿಗಳನ್ನು ಸಾಗಿಸಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಸರ್ಕಾರದ ನಿಯಮಾನುಸಾರ ಬಾಡಿಗೆಯನ್ನು ವಿಧಿಸಲಾಗುವುದು.

ನಿಗದಿತ ದಿನಾಂಕದೊಳಗೆ ಪೂರ್ಣ ಹಣ ಸಂದಾಯ ಮಾಡದೇ ಇದ್ದಲ್ಲಿ, ಬಿಡ್‌ದಾರರ ಮುಂಗಡ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಯಾವುದೇ ತಕರಾರು ಉದ್ಭವಿಸಿದಲ್ಲಿ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ರವರ ನಿರ್ಣಯವೇ ಅಂತಿಮವಾಗಿರುತ್ತದೆ.

ಯಶಸ್ವಿಯಾಗದೇ ಇರುವಂತಹ ಬಿಡ್‌ದಾರರಿಗೆ ಅವರು ಪಾವತಿಸಿದ ಮುಂಗಡ ಠೇವಣಿ ಹಣವನ್ನು ಅದೇ ದಿನ ಹಿಂದಿರುಗಿಸಲಾಗುವುದು.

ಜಂಟೀ ನಿರ್ದೇಶಕರು (ತರಬೇತಿ)

ಪಿ.ಆರ್. 902 ಆಯುಕ್ತರ ಪರವಾಗಿ, ಉದ್ಯೋಗ ಮತ್ತು ತರಬೇತಿ.

## E¿ AÊ§ àNÊP¨ñºPñËNïôÔÊ PkóË, ÄNYçöÊô ¼YÊ ÕÄñY, ÄNYçöÊô-03

## àNV:H5.Ôñä¼ÕÑ.pHÑý. /09-10

## ÃåÊNY äÊñnô ÔïñÊñv ¿Pv¨

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಇಲಾಖೆಯಲ್ಲಿರುವ ಈ ಕೆಳಕಂಡ ವಾಹನಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ನಿರುಪಯುಕ್ತ ವಾಹನಗಳೆಂದು ಧೃಡೀಕರಣ ನೀಡಿರುವುದರಿಂದ ಇವುಗಳನ್ನು ದಿನಾಂಕಃ 12.11.2009 ರಂದು ಪೂರ್ವಾಹ್ನ 11.00 ಗಂಟೆಗೆ ಸರಿಯಾಗಿ ವಲಯ ಅರಣ್ಯಾಧಿಕಾರಿ ಕಚೇರಿ, ಯಲಹಂಕ ವಲಯ, ಪುಟ್ಟೇನಹಳ್ಳಿ ಸಂಕೀರ್ಣದಲ್ಲಿ ವಾಹನ ಹೇಗಿದೆಯೋ ಹಾಗೆ ಇರುವ ಸ್ಥಿತಿಯಲ್ಲಿಯೇ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುತ್ತಾರೆ. ಇಷ್ಟವುಳ್ಳ ಬಿಡ್ಡುದಾರರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಹಿರಂಗ ಹರಾಜಿನಲ್ಲಿ ಪಾಲುಗೊಳ್ಳಬಹುದು. ದಿನಾಂಕಃ12.11.2009ರಂದು ಬಹಿರಂಗ ಹರಾಜು ನಡೆಯದಿದ್ದಲ್ಲಿ ಮರು ಬಹಿರಂಗ ಹರಾಜನ್ನು ದಿನಾಂಕಃ 16.11.2009 ರಂದು ಇದೇ ಸ್ಥಳದಲ್ಲಿ ನಡೆಸಲಾಗುವುದು.

| ಕ್ರಮ ಸಂಖ್ಯೆ | ವಾಹನದ ನೋಂದಣಿ ಸಂಖ್ಯೆ | ವಾಹನದ ಮಾದರಿ | ಹರಾಜಿನ ದಿನಾಂಕ: |
|---|---|---|---|
| 1 | CAG-1263 | HMT-Tractor | 12.11.2009 |
| 2 | KA-01-G-8245 | Trailer | 12.11.2009 |

## ½NïôÔôYçô

1. ಹರಾಜಿನಲ್ಲಿ ಭಾಗವಹಿಸುವವರು ರೂ. 3000.00 ಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ಪದನಾಮಕ್ಕೆ ಡಿ.ಡಿ. ತೆಗೆದು ಅಥವಾ ಹರಾಜಿಗೆ ಹಾಜರಾಗುವ ಮುನ್ನ ರೂ.3000.00 ಗಳನ್ನು ಇ.ಎಂ.ಡಿ. ಪಾವತಿಸಿ ಭಾಗವಹಿಸುವುದು.
2. ಮೇಲ್ಕಂಡ ಹರಾಜಿನ ವಾಹನಗಳನ್ನು ಪುನಃ ಉಪಯೋಗಿಸತಕ್ಕದ್ದಲ್ಲ. ಇದಕ್ಕೆ ಸಂಬಂಧಪಟ್ಟಂತೆ ಯಾವುದೇ ದಾಖಲಾತಿಗಳು ಇಲಾಖೆಯಿಂದ ದೊರಕುವುದಿಲ್ಲ.
3. ಹರಾಜಿನಲ್ಲಿ ಭಾಗವಹಿಸಲು ಇಚ್ಚೆವುಳ್ಳವರು ಹರಾಜು ಪ್ರಾರಂಭವಾಗುವ ಮುನ್ನ ಕಛೇರಿಯ ವೇಳೆಯಲ್ಲಿ ವಾಹನ ಇರುವ ಸ್ಥಳದಲ್ಲಿ ವಾಹನವನ್ನು ಪರೀಕ್ಷಿಸಿ ಅದರ ಸ್ಥಿತಿಗತಿಯನ್ನು ತಪಾಸಣೆ ಮಾಡಿಕೊಂಡು ಖಾತ್ರಿ ಮಾಡಿಕೊಳ್ಳತಕ್ಕದ್ದು, ಹರಾಜು ಮುಗಿದ ನಂತರ ಯಾವ ದೂರನ್ನು ಪರಿಗಣಿಸುವುದಿಲ್ಲ.
4. ಯಶಸ್ವಿಯಾದ ಬಿಡ್ಡುದಾರರು ಹರಾಜು ಮುಗಿದ ತಕ್ಷಣ ಹರಾಜಿನ ಮೊತ್ತದ ಅರ್ಧ ಭಾಗ (ಠೇವಣಿ ಹಣವು ಸೇರಿದಂತೆ) ಮತ್ತು ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳ ಸಹಿತ ಹಣವನ್ನು ಪಾವತಿಸಿ ರಶೀದಿಯನ್ನು ಪಡೆದುಕೊಳ್ಳತಕ್ಕದ್ದು ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಮೂಲ ಬಿಡ್ಡುದಾರರ ಸ್ವಂತ ಖರ್ಚು ಮತ್ತು ಜವಾಬ್ದಾರಿಯ ಮೇರೆಗೆ ಮರು ಹರಾಜು ಮಾಡಲಾಗುವುದು. ತಪ್ಪಿತಸ್ಥರು ಮರು ಹರಾಜಿನಲ್ಲಿ ಆದಂತಹ ನಷ್ಟ ತುಂಬಿಕೊಡಲು ಜವಾಬ್ದಾರರಾಗಿರುತ್ತಾರೆ. ತಪ್ಪಿದಲ್ಲಿ ಈ ನಷ್ಟವನ್ನು ಮೂಲ ಬಿಡ್ಡುದಾರರಿಂದ ಅರಣ್ಯ ಕಾಯ್ದೆ 1969 ಅಧಿನಿಯಮ 109ರ ಪ್ರಕಾರ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.
5. ಸಂಬಂಧಪಟ್ಟ ಅಧಿಕಾರಿಗಳಿಂದ ಬಿಡ್ಡು ಅಂಗೀಕಾರವಾದ ನಂತರ ಯಶಸ್ವಿ ಬಿಡ್ಡುದಾರರ ಹೆಸರಿಗೆ ನೋಂದಣಿ ಅಂಚೆ / ಸ್ವೀಕೃತಿ ಪತ್ರದ ಮೂಲಕ ತಿಳಿಸಲಾಗುವುದು. ಈ ತಿಳುವಳಿಕೆಯನ್ನು ಹರಾಜು ನಡೆದ ದಿನದಿಂದ 30 ದಿನಗಳ ಒಳಗಾಗಿ ಯಶಸ್ವಿ ಬಿಡ್ಡುದಾರರಿಗೆ ತಿಳಿಸಲಾಗುವುದು. ಯಶಸ್ವಿ ಬಿಡ್ಡುದಾರರು ಉಳಿದ ಅರ್ಧ ಭಾಗ ಹರಾಜಿನ ಮೊತ್ತದ ಹಣವನ್ನು ಸ್ವೀಕೃತಿ ಅರ್ಜಿಯ ಪ್ರತಿ ತಲುಪಿದ 15 ದಿನಗಳ ಒಳಗೆ ಪಾವತಿ ಮಾಡಿ ವಾಹನವನ್ನು ಬಿಡಿಸಿಕೊಳ್ಳುವುದು. ತಪ್ಪಿದಲ್ಲಿ ನಿಬಂಧನೆಯ ಸಂಖ್ಯೆ 3ರ ಪ್ರಕಾರ ಕ್ರಮವನ್ನು ತೆಗೆದುಕೊಳ್ಳಲಾಗುವುದು.
6. ಹರಾಜನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಇರುತ್ತದೆ. ಯಾವುದೇ ಕಾರಣವನ್ನು ನೀಡದೆ ಸಂಬಂಧಿಸಿದ ಅಧಿಕಾರಿಗಳು ಹರಾಜನ್ನು ತಿರಸ್ಕರಿಸಬಹುದಾಗಿರುತ್ತದೆ.

7. ಯಶಸ್ವಿನ ಬಿಡ್ದುದಾರರಿಗೆ ತೀವ್ರ ಕಷ್ಟದ ಪರಿಸ್ಥಿತಿಯಲ್ಲಿ ವಾಹನದ ಬಾಕಿ ಮೊತ್ತವನ್ನು ನಿಗದಿತ ಅವಧಿಯಲ್ಲಿ ಪಾವತಿಸಲು ಸಾಧ್ಯವಾಗದಿದ್ದಲ್ಲಿ ಬಿಡ್ದುದಾರರ ಮನವಿ ಮೇರೆಗೆ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ವೃತ್ತ, ಬೆಂಗಳೂರು ಅಥವಾ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರು ಬಾಕಿ ಮೊತ್ತ ಅದರ ಮೇಲಿನ ಬಡ್ಡಿ ಹಾಗೂ ನೆಲಬಾಡಿಗೆಯನ್ನು ವಿಧಿಸಿ, ಅವಧಿ ವಿಸ್ತರಣೆ ನೀಡಲು ಅಧಿಕಾರವುಳ್ಳರಾಗಿರುತ್ತಾರೆ.
8. ಸದರಿ ವಾಹನದ ಮೇಲೆ ಬೇರೆ ಯಾವುದೇ ಹಣ ಬಾಕಿ ಇದ್ದಲ್ಲಿ ಸದರಿ ಬಾಕಿ ತೀರುವಳಿ ಜವಾಬ್ದಾರಿ ಬಿಡ್ದುದಾರರಾಗಿರುತ್ತಾರೆ.
9. ಹರಾಜು ದಿನಾಂಕ: 12.11.2009 ರಂದು ಪೂರ್ವಾಹ್ನ 11.00 ಗಂಟೆಗೆ ಸರಿಯಾಗಿ ವಾಹನಗಳನ್ನು ದಾಸ್ತಾನು ಮಾಡಿರುವ ಸ್ಥಳ ವಲಯ ಅರಣ್ಯಾಧಿಕಾರಿ, ಯಲಹಂಕ ವಲಯ ಕಚೇರಿ, ಪುಟ್ಟೇನಹಳ್ಳಿ ಇಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳಿಂದ ಹರಾಜು ನಡೆಸಲಾಗುವುದು.
10. ವಾಹನದ ಮಾಲೀಕತ್ವವನ್ನು ಬದಲಾಯಿಸಿಕೊಳ್ಳುವ ಹೊಣೆಯು ಯಶಸ್ವಿ ಬಿಡ್ದುದಾರರದಾಗಿರುತ್ತದೆ. ಆದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಇಲಾಖೆಯ ಸಹಕಾರವನ್ನು ನೀಡಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ
ಪಿ.ಆರ್. 915 ಬೆಂಗಳೂರು ನಗರ ವಿಭಾಗ, ಬೆಂಗಳೂರು

**ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ**
**ಜಂಟಿ ನಿರ್ದೇಶಕರವರ ಕಚೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ**
**100 ಅಡಿರಸ್ತೆ, ರಾಜೇಂದ್ರ ನಗರ, ಶಿವಮೊಗ್ಗ–57720**
**ಪ್ರಕಟಣೆ**
**ಸಂ.ಜಿಕೈಕೇ/ಶಿ/ಅಧೀ/ಅನುಪವಿಲೆ/2009–10, ದಿನಾಂಕ: 14ನೇ ಅಕ್ಟೋಬರ್ 2009**

ಈ ಕಛೇರಿಯಲ್ಲಿನ ರೂ. 59,903/– (ಐವತ್ತೊಂಬತ್ತು ಸಾವಿರದ ಒಂಬತ್ತು ನೂರಾ ಮೂರು ರೂ.ಗಳು ಮಾತ್ರ) ಮೌಲ್ಯದ ಅನುಪಯುಕ್ತ ವಸ್ತುಗಳನ್ನು ದಿನಾಂಕ: 26.11.2009ರ ಗುರುವಾರದಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗವಾಗಿ ಹರಾಜು ಮಾಡಲಾಗುವುದು. ಹರಾಜಿನ ನಿಬಂಧನೆಗಳನ್ನು ಕಛೇರಿಯ ಕೆಲಸದ ದಿನಗಳಲ್ಲಿ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದಾಗಿರುತ್ತದೆ.

**ಬಿ.ಎಲ್. ಬಾಲ್ಯಾ ನಾಯಕ**
ಪಿ.ಆರ್. 898 ಜಂಟಿ ನಿರ್ದೇಶಕರು,
ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ

**FORM - IV**
**(See Rule 12)**
**NOTICE**

It is hereby notified that the undersigned has changed his/her name from **MAHABOOBSAB S/o PEERSAB PINJAR** to **MAHABOOBSAB S/o PEERSAB ERESEMI**

P.D. 167 **MAHABOOBSAB S/o PEERSAB PINJAR**

[ನಮೂನೆ–1]
[9ನೇ ನಿಯಮ ನೋಡಿ]
**ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ**
**ಆಯುಕ್ತರ ಕಛೇರಿ, ಪಶುಪಾಲನಾ ಇಲಾಖೆ, ಬೆಂಗಳೂರು–1**
**ಅಧಿಸೂಚನೆ**

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪಶುಚಿಕಿತ್ಸಾಲಯ, ಅಕ್ಕಿವಳ್ಳಿ ಹಾನಗಲ್ ತಾ: ಹಾವೇರಿ ಜಿಲ್ಲೆ ಇಲ್ಲಿ ಪಶುವೈದ್ಯಕೀಯ ಸಹಾಯಕರಾಗಿ ಕೆಲಸ ಮಾಡುತ್ತಿರುವ **ಶಿವಪುತ್ರಪ್ಪ ನಿಂಗಪ್ಪ ಹಡಪದ** ಇವರ ಹೆಸರನ್ನು **ಶಿವಪುತ್ರಪ್ಪ ನಿಂಗಪ್ಪ ಬಾಗೇವಾಡಿ** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಆಯುಕ್ತರ ಪರವಾಗಿ
ಪಿ.ಡಿ. 168 ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಪ್ರಾದೇಶಿಕ ಅರಣ್ಯ ವಿಭಾಗ, ತುಮಕೂರು,**

**ಅರಣ್ಯ ಕಾಮಗಾರಿಗಳ ಟೆಂಡರ್ ಸಂಖ್ಯೆ: ಎ.ಅಕಾ/ಟೆಂಡರ್/ವಿವ.9/2009–10, ದಿನಾಂಕ: 20ನೇ ಅಕ್ಟೋಬರ್ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2009–10ನೇ ಸಾಲಿನಲ್ಲಿ ತುಮಕೂರು ಪ್ರಾದೇಶಿಕ ಅರಣ್ಯ ವಿಭಾಗದ ವ್ಯಾಪ್ತಿಗೆ ಒಳಪಡುವ ವಲಯಗಳಲ್ಲಿನ ಈ ಕೆಳಕಂಡ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2009–10ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಪ್ರತಿಯೊಂದು ಕಾಮಗಾರಿಗೆ ಪ್ರತ್ಯೇಕವಾಗಿ ವಲಯವಾರು ಮೊಹರಾದ ಪ್ರತಿ ಕಾಮಗಾರಿಗೆ ಶೇಕಡವಾರು ಟೆಂಡರ್ ಕರೆಯಲಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ 27–11–2009 ರಂದು 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು, ದಿನಾಂಕ 27–11–2009 ರಂದು ಯಾವ ಕಾಮಗಾರಿಗೂ ಟೆಂಡರ್‌ಗಳು ಬಾರದೇ ಇದ್ದಲ್ಲಿ ಮತ್ತೆ ಎರಡನೇ ಬಾರಿಗೆ ದಿನಾಂಕ: 04–12–2009ರಂದು 3.00 ಗಂಟೆಗೆ ಸ್ವೀಕರಿಸಲಾಗುವುದು. ಮತ್ತೆ ಪ್ರತ್ಯೇಕವಾಗಿ ಪ್ರಕಟಣೆ ನೀಡಲಾಗುವುದಿಲ್ಲ.

| ಕ್ರ ಸಂ | ಟೆಂಡರ್ ಹೊರಡಿಸಿದ ಪ್ರಾಧಿಕಾರ | ಟೆಂಡರ್ ಕ್ರಮಾಂಕ ಹಾಗೂ ದಿನಾಂಕ | ವಲಯ ಸ್ಥಳ ಮತ್ತು ಕಾಮಗಾರಿ ವಿವರ | ಅಂದಾಜು ಮೊತ್ತ (ರೂ.ಗಳಲ್ಲಿ) | ನಿಗಧಿ ಪಡಿಸಿದ ಇ.ಎಂ.ಡಿ. ಮೊತ್ತ (ರೂ ಗಳಲ್ಲಿ) | ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ | ಭರ್ತಿ ಮಾಡಿದ ಫಾರಂ ಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | ಟೆಂಡರ್ ತೆರೆಯುವ ದಿನಾಂಕ | ಟೆಂಡರ್ ಸ್ವೀಕರಿಸುವ ಪ್ರಾಧಿಕಾರ |
|---|---|---|---|---|---|---|---|---|---|---|
| 1 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.9/ 2009–10, ದಿನಾಂಕ 20–10–2009. KFDF | 2009–10ನೇ ಸಾಲಿನಲ್ಲಿ ಕುಣಿಗಲ್ ವಲಯದ ಹೊನ್ನಮಾಚನಹಳ್ಳಿ, ಉಳ್ಳಾಳಬೆಟ್ಟ ಮೀಸಲು ಅರಣ್ಯದಲ್ಲಿ ಮಾದರಿ 04ರ ಅಡಿಯಲ್ಲಿ 20 ಹೆ. ವಿಸ್ತೀರ್ಣದಲ್ಲಿ (ಪಿಟ್ಸ್ ಅಗೆತ, Ripping by D-80 Buldozer dozing and uprooting ಜಾನುವಾರು ನಿರೋಧಕ ಕಂದಕಗಳನ್ನು ಮ್ಯಾನುಯಲ್ ಅಥವಾ ಜೆ.ಸಿ.ಬಿ. ಯಂತ್ರದ ಮೂಲಕ ತೆಗೆಯುವುದು) ಮುಂಗಡ ಕಾಮಗಾರಿಗಳನ್ನು ಕೈಗೊಳ್ಳುವುದು. | 269800 | 6750 | ಅರ್ಜಿ ನಿಗದಿ ಪಡಿಸಿರುವುದಿಲ್ಲ | 27–11–2009 ಮ.1.00 ಗಂಟೆವರೆಗೆ | 27–11–09 ಮ 3.00 ಗಂಟೆವರೆಗೆ | 27–11–09 ಮ 4.00 ಗಂಟೆಗೆ | ಉಪ ಅರಣ್ಯ ಸಂರಕ್ಷಣಾಧಿಕಾರಿ ಪ್ರಾದೇಶಿಕ ಅರಣ್ಯ ವಿಭಾಗ, ತುಮಕೂರು |

| ಕ್ರ ಸಂ | ಟೆಂಡರ್ ಹೊರಡಿಸಿದ ಪ್ರಾಧಿಕಾರ | ಟೆಂಡರ್ ಕ್ರಮಾಂಕ ಹಾಗೂ ದಿನಾಂಕ | ವಲಯ ಸ್ಥಳ ಮತ್ತು ಕಾಮಗಾರಿ ವಿವರ | ಅಂದಾಜು ಮೊತ್ತ (ರೂ.ಗಳಲ್ಲಿ) | ನಿಗಧಿ ಪಡಿಸಿದ ಇ.ಎಂ.ಡಿ. ಮೊತ್ತ (ರೂ ಗಳಲ್ಲಿ) | ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ | ಭರ್ತಿ ಮಾಡಿದ ಫಾರಂ ಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | ಟೆಂಡರ್ ತೆರೆಯುವ ದಿನಾಂಕ | ಟೆಂಡರ್ ಸ್ವೀಕರಿಸುವ ಪ್ರಾಧಿಕಾರ |
|---|---|---|---|---|---|---|---|---|---|---|
| 2 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ತುಮಕೂರು. | ಎ.ಅಕಾ/ ಟೆಂಡರ್/ ವಿವ.9/ 2009–10, ದಿನಾಂಕ 20–10–2009. KFDF | 2009–10ನೇ ಸಾಲಿನಲ್ಲಿ ಮಧುಗಿರಿ ವಲಯದ ಗುಂಡಗಲ್‌ಗೋಮಾಳ ಮಾದರಿ 04ರ ಅಡಿಯಲ್ಲಿ 10 ಹೆ. ವಿಸ್ತೀರ್ಣದಲ್ಲಿ (ಪಿಟ್ಸ್ ಅಗೆತ, Ripping by D-80 Buldozer dozing and uprooting ಜಾನುವಾರು ನಿರೋಧಕ ಕಂದಕಗಳನ್ನು ಮ್ಯಾನುಯಲ್ ಅಥವಾ ಜೆ.ಸಿ.ಬಿ. ಯಂತ್ರದ ಮೂಲಕ ತೆಗೆಯುವುದು) ಮುಂಗಡ ಕಾಮಗಾರಿಗಳನ್ನು ಕೈಗೊಳ್ಳುವುದು. | 134900 | 3400 | ಅರ್ಜಿ ನಿಗದಿ ಪಡಿಸಿರುವುದಿಲ್ಲ | 27–11–2009 ಮ.1.00 ಗಂಟೆವರೆಗೆ | 27–11–09 ಮ 3.00 ಗಂಟೆವರೆಗೆ | 27–11–09 ಮ 4.00 ಗಂಟೆಗೆ | ಉಪ ಅರಣ್ಯ ಸಂರಕ್ಷಣಾಧಿಕಾರಿ ಪ್ರಾದೇಶಿಕ ಅರಣ್ಯ ವಿಭಾಗ, ತುಮಕೂರು |
| 2 | –“– | ನಿಸರ್ಗ ಪ್ರವಾಸೋದ್ಯಮ ಯೋಜನೆ | 2009–10ನೇ ಸಾಲಿನಲ್ಲಿ ಗುಬ್ಬಿ ವಲಯದ ಸುರಿಗೇನಹಳ್ಳಿ ಅರಣ್ಯ ವಿಶ್ರಾಂತಿ ಗೃಹದ ಹತ್ತಿರ ನೀರಿನ ತೊಟ್ಟಿ ನಿರ್ಮಾಣ ಹಾಗೂ ಬೋರ್‌ವೆಲ್‌ನಿಂದ ಟ್ಯಾಂಕ್‌ವರೆಗೆ ಪೈಪು ಅಳವಡಿಸುವುದು. | 300000 | 7500 | –“– | –“– | –“– | –“– | –“– |

## ನಿಬಂಧನೆಗಳು

1. ಎ) ಟೆಂಡರ್ ಫಾರಂನ್ನು ಟೆಂಡರ್ ದಿನಾಂಕದಂದು ಅಪರಾಹ್ನ 1.00 ಗಂಟೆಯವರೆಗೆ ರೂ. 200–00 ಮತ್ತು ತೆರಿಗೆ ಪಾವತಿ ಮಾಡಿ ಪಡೆಯಬಹುದಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂನ್ನು ಸಂಬಂಧಪಟ್ಟ ವಲಯಕ್ಕೆಂದು ನಮೂದಿಸಿ ಈ ಕಛೇರಿಯಲ್ಲಿ ಇಟ್ಟಿರುವ ಮೊಹರಾದ ಪೆಟ್ಟಿಗೆಯಲ್ಲಿ ಮಧ್ಯಾಹ್ನ 3.00 ಗಂಟೆಯವರೆಗೆ ಹಾಕಬಹುದಾಗಿದೆ.

   ಬಿ) ಟೆಂಡರ್ ಫಾರಂನ್ನು ವಲಯ ಸ್ಥಳವಾರು ಯೋಜನೆ ಅಥವಾ ಯೋಜನೇತರವಾರು ಪ್ರತ್ಯೇಕವಾಗಿ ಉಪಯೋಗಿಸುವುದು.

2. i) ಭರ್ತಿ ಮಾಡಿದ ಟೆಂಡರುಗಳನ್ನು ವಲಯವಾರು, ಸ್ಥಳ ಮತ್ತು ಕೆಲಸವಾರು ಸಲ್ಲಿಸಬೇಕು. ಹಾಗೂ ದರವನ್ನು ನಮೂದಿಸುವಾಗ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ರವರ 2009–10ನೇ ಸಾಲಿಗೆ ಮಂಜೂರಾದ ಎಸ್.ಎಸ್.ಆರ್. ದರಕ್ಕೆ ಶೇಕಡವಾರು ಇಂತಿಷ್ಟು ಹೆಚ್ಚು ಸಮ ಅಥವಾ ಕಡಿಮೆ ಎಂದು ನಮೂದಿಸಬೇಕು.

   ii) ಮ್ಯಾನುಯಲ್ ಜಾನುವಾರು ನಿರೋಧಕ ಕಂದಕ (ಸಿಪಿಟಿ) ತೆಗೆಯಲು ಹಾಗೂ ಜೆಸಿಬಿ ಯಂತ್ರ ಉಪಯೋಗಿಸಿ ಸಿಪಿಟಿ ತೆಗೆಯಲು ಪ್ರತ್ಯೇಕವಾಗಿ ದರಗಳನ್ನು ನಮೂದಿಸಬೇಕು.

   iii) ನೀರಿನ ತೊಟ್ಟಿ ನಿರ್ಮಾಣಕ್ಕೆ 2009–10ನೇ ಸಾಲಿನ ಪಿ.ಡಬ್ಲ್ಯೂ.ಡಿ. ದರಕ್ಕೆ ಶೇಕಡವಾರು ಇಂತಿಷ್ಟು ಹೆಚ್ಚು, ಸಮ ಅಥವಾ ಕಡಿಮೆ ಎಂದು ನಮೂದಿಸಬೇಕು.

   iv) Ripping by D-80 Buldozer ಮತು dozing & uprooting ಗೆ ಪ್ರತಿ ಹೆಕ್ಟೇರ್‌ಗೆ ದರ ನಮೂದಿಸುವುದು.

3. ಸ್ವೀಕರಿಸಲಾದ ಟೆಂಡರ್‌ಗಳನ್ನು ಆಯಾ ದಿನಾಂಕಗಳಂದು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಅಪರಾಹ್ನ 4.00 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

4. ಕೆಲಸಗಳು ಕಾಲಬದ್ಧವಾಗಿದ್ದು ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತುಪಡಿಸಿದವುಗಳಾಗಿರುತ್ತವೆ.

5. ಪ್ರತಿ ಟೆಂಡರ್‌ದಾರರು ಕಾಮಗಾರಿಗಳನ್ನು ನಿರ್ವಹಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳನ್ನು ಸ್ವಂತವಾಗಿ ಮಾಡಿಕೊಳ್ಳಬೇಕು.

6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವವರು ಆಯಾ ಕೆಲಸಕ್ಕೆ ನಿಗದಿಪಡಿಸಿದ ಇ.ಎಂ.ಡಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರ ಹೆಸರಿಗೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿ.ಡಿ. ರೂಪದಲ್ಲಿ ಪಾವತಿಸಬೇಕು.

7. ಗುತ್ತಿಗೆದಾರರು ಸಲ್ಲಿಸುವ ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

8. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರು ಕಾಯ್ದಿರಿಸಿಕೊಂಡಿದ್ದಾರೆ.

9. ಪೂರ್ಣಗೊಂಡ ಕಾಮಗಾರಿಗಳಿಗೆ ಸರ್ಕಾರದಿಂದ ಅನುದಾನವು, ತುಮಕೂರು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಗೆ ತಲುಪಿದ ನಂತರ ಪಾವತಿ ಮಾಡಲಾಗುವುದಿಲ್ಲ.

10. ಈ ಮೇಲಿನ ಕಾಮಗಾರಿಗಳ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳ್ಳುವ ಅನುದಾನ ಮತ್ತು ಅನುಮೋದನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷದಲ್ಲಿ ಸರ್ಕಾರದಿಂದ ಹಣ ಬಿಡುಗಡೆಯಾಗುವುದು ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
11. ಈ ಅರಣ್ಯ ಕಾಮಗಾರಿಗಳು ಕಾಲಬದ್ದ ಕಾಮಗಾರಿಗಳಾಗಿದ್ದು, ಅವುಗಳನ್ನು ಕಾಲಮಿತಿ ಮತ್ತು ನಿಗದಿತ ಸಮಯಗಳಲ್ಲಿ ಕಾಮಗಾರಿಗಳನ್ನು ನಿರ್ವಹಿಸಲು ವಿಫಲರಾದಲ್ಲಿ ಅಂತಹ ಕಾಮಗಾರಿಗಳನ್ನು ಇಲಾಖಾ ಮೂಲಕ ನಿರ್ವಹಿಸಲಾಗುವುದು ಹಾಗೂ ಇಎಂಡಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು, ಇಲಾಖಾ ಮೂಲಕ ನಿರ್ವಹಿಸಿದಲ್ಲಿ ಹೆಚ್ಚು ವೆಚ್ಚವಾದರೆ ಅದನ್ನು ಸಂಬಂಧಪಟ್ಟವರಿಂದ ವಸೂಲಿ ಮಾಡಲಾಗುವುದು.
12. ವಿಜೇತ ಟೆಂಡರ್‌ದಾರರು ಆದೇಶದ 7 ದಿನಗಳೊಳಗಾಗಿ ಕರಾರನ್ನು ಚಾಲ್ತಿ ದರ ಛಾಪಾ ಕಾಗದದ ಮೇಲೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಸಮಕ್ಷಮದಲ್ಲಿ ಮಾಡಿಕೊಳ್ಳತಕ್ಕದ್ದು,
13. ಎ) ವಿಜೇತ ಟೆಂಡರ್‌ದಾರರು ಕರಾರಿನಲ್ಲಿ ನಮೂದಿಸಿದ ಅವಧಿಯಲ್ಲಿ ಕಾಮಗಾರಿಯನ್ನು ಪೂರೈಸತಕ್ಕದ್ದು,

    ಬಿ) ಅನಿವಾರ್ಯ ಸಂದರ್ಭಗಳಲ್ಲಿ ಅವಧಿಯನ್ನು ವಿಸ್ತರಿಸುವ /ತಿರಸ್ಕರಿಸುವ ಸಂಪೂರ್ಣ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸೇರಿರುತ್ತದೆ.
14. ಕೆಲಸಗಳನ್ನು ಆಯಾಯ ಉಪ ವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ಪರಿಶೀಲನೆ ಹಾಗೂ ದೃಢೀಕರಣವನ್ನು ಅನುಸರಿಸಿ ಬಿಲ್ಲನ್ನು ಪಾವತಿ ಮಾಡಲಾಗುವುದು. ಹಾಗೂ ಪಾವತಿಸುವ ಶೇ.2 ರಷ್ಟು ಹಣವನ್ನು ಆದಾಯ ತೆರಿಗೆ ಬಾಬ್ತು ಹಿಡಿಯಲಾಗುವುದು ಮತ್ತು 2.5 ರಷ್ಟು ಭದ್ರತಾ ಠೇವಣಿ ಹಿಡಿಯಲಾಗುವುದು. ಕಾಲಬದ್ದ ಕೆಲಸಗಳ ಬಾಬ್ತು ಸರ್ಕಾರವು ನಿಗದಿಪಡಿಸಿದ ಇತರೆ ತೆರಿಗೆಗಳನ್ನು ಸಂಬಂಧಪಟ್ಟ ಬಿಲ್ಲುಗಳಲ್ಲಿ ಕಟಾಯಿಸಲಾಗುವುದು.
15. ಯಾವುದೇ ತಕರಾರಿನ ಬಗ್ಗೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು. ಅವರ ಆದೇಶವು ಅಧೀನಾಧಿಕಾರಿಗಳಿಗೆ ಹಾಗೂ ಗುತ್ತಿಗೆದಾರರಿಗೆ ಪಾಲನಾರ್ಹವಾದುದು.
16. ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಆದೇಶದ ಬಗ್ಗೆ ತೃಪ್ತಿಯಿಲ್ಲವಾದರೆ ಹಾಸನ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು. ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.
17. ಕಾಮಗಾರಿ ಸ್ಥಳಗಳು ತಾತ್ಕಾಲಿಕವಾಗಿದ್ದು ಅವುಗಳ ಸ್ಥಳ ಬದಲಾವಣೆಗಳಾಗುವ ಸಂಭವವಿರುತ್ತದೆ. ಹೆಚ್ಚಿನ ಮಾಹಿತಿಗಾಗಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.
18. ಕೆಲಸದ ಪರಿಣಾಮ ಹೆಚ್ಚುವರಿ ಅಥವಾ ಕಡಿಮೆಯಾಗುವ ಸಾಧ್ಯತೆಯಿದ್ದು ಹೆಚ್ಚುವರಿಯಾದ ಕೆಲಸವನ್ನು ಹಾಗೂ ಇತರೆ ಕಾಮಗಾರಿಗಳನ್ನು ಸಹ ಒಪ್ಪಿಗೆಯಾದ ಟೆಂಡರಿನ ದರದಲ್ಲಿ ಆಯಾ ವಲಯ ಅರಣ್ಯಾಧಿಕಾರಿಗಳು ಸೂಚಿಸುವ ಜಾಗದಲ್ಲಿಯೇ ಮಾಡತಕ್ಕದ್ದು.
19. ಕರ್ನಾಟಕ ಅರಣ್ಯ ಕಾಯ್ದೆ ಕರ್ನಾಟಕ ಅರಣ್ಯ ಸಂಹಿತೆ, ಕರ್ನಾಟಕ ಅರಣ್ಯ ಮ್ಯಾನ್ಯುಯಲ್ ಹಾಗೂ ಸರ್ಕಾರಿ ಅಧಿಸೂಚನೆ, ಆದೇಶಗಳು ಮತ್ತು ಕಾಲಕಾಲಕ್ಕೆ ಇಲಾಖೆಯಿಂದ ನೀಡಿದ ಸುತ್ತೋಲೆ ಮೇಲೆ ನಿರ್ದೇಶನ ಪ್ರಕಾರ ಅರಣ್ಯ ಗುತ್ತಿಗೆದಾರರು ಹಾಗೂ ಒಟ್ಟಾಗಿ ಕಾಮಗಾರಿಗಳನ್ನು ನಿರ್ವಹಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ತುಮಕೂರು ವಿಭಾಗ, ತುಮಕೂರು.

ಪಿ.ಆರ್. 916

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ – 576101**

**ಕಾರ್ಯನಿರ್ವಾಹಕ ಇಂಜಿನಿಯರ್ ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ**

**ಟೆಂಡರು ಮುಂದೂಡಿಕೆ**

**ನಂ. ಕಾನಿಇಂ:ಬಂಮೀವಿ:ಉಡುಪಿ:ಎಇ:ಟೆಂಡರು ಸೂಚನೆ:994:2009–2010**

ಈ ಕಛೇರಿ ಟೆಂಡರು ಪ್ರಕಟಣೆ ಸಂ.ಕಾನಿಇಂ:ಬಂಮೀವಿ:ಉಡುಪಿ:ಎಇ:ಟೆಂಡರು ಸೂಚನೆ:877:2009–2010 ದಿನಾಂಕ:24.09.2009ರಲ್ಲಿ ಹಾಗೂ "ಉದಯವಾಣಿ", "ಪ್ರಜಾವಾಣಿ" ಮತ್ತು "ಟೈಮ್ಸ್ ಆಫ್ ಇಂಡಿಯಾ" ದಿನ ಪತ್ರಿಕೆಗಳಲ್ಲಿ ದಿನಾಂಕ: 3.10.2009ರಲ್ಲಿ ಪ್ರಕಟಿಸಿದಂತೆ ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕು, ಗಂಗೊಳ್ಳಿ ಮೀನುಗಾರಿಕಾ ಬಂದರಿನಲ್ಲಿ ನೌಕಾನಾಲೆಗೆ ಕೈ ಬದಿಗೆ ಚೈ.0.00ಮೀ. ರಿಂದ 105.00 ಮೀ. ಉದ್ದಕ್ಕೆ Northern ಬ್ರೇಕ್ ವಾಟರ್: ಗೈಡ್ ಬಂಡ್ ನಿರ್ಮಾಣ ಕಾಮಗಾರಿಗೆ ಆಹ್ವಾನಿಸಲಾಗಿದ್ದ ಟೆಂಡರನ್ನು ಮುಂದೂಡಲಾಗಿದೆ. ಅಂತೆಯೇ ಇ–ಪ್ರೊಕ್ಯೂರ್‌ಮೆಂಟ್‌ನಲ್ಲಿ ಡೌನ್‌ಲೋಡ್ ಮಾಡಿಕೊಂಡು ಟೆಂಡರ್ ಸಲ್ಲಿಸಲು ನಿಗದಿ ಪಡಿಸಿದ ದಿನಾಂಕ: 26.10.2009 ರಿಂದ 06.11.2009ರ ಸಂಜೆ 4.00 ಗಂಟೆವರೆಗೆ (http://eproc.karnataka.gov.in). ಉಳಿದ ಯಾವುದೇ ವಿಷಯಗಳಲ್ಲಿ ಬದಲಾವಣೆ ಇರುವುದಿಲ್ಲ. ಹೆಚ್ಚಿನ ಮಾಹಿತಿಗಳಿಗಾಗಿ ಮೇಲೆ ತಿಳಿಸಿದ ಕಛೇರಿಯನ್ನು ಸಂಪರ್ಕಿಸುವುದು.

ಕಾರ್ಯನಿರ್ವಾಹಕ ಇಂಜಿನಿಯರ್

ಪಿ.ಆರ್. 910 ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,

ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ಕಿರು ಅರಣ್ಯ ಉತ್ಪನ್ನ ಮರು–ಟೆಂಡರ್ ಕಂ ಹರಾಜು ಮಾರಾಟ ಸಂಕ್ಷಿಪ್ತ ಪ್ರಕಟಣೆ**

**ಕ್ರ. ಸಂ. ಎ4–ಎಂಎಫ್‌ಪಿ–ಸಿಆರ್–28/2009–10, ದಿನಾಂಕ: 13ನೇ ಅಕ್ಟೋಬರ್ 2009**

ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತಿಳಿಯಪಡಿಸುವುದೇನೆಂದರೆ ದಿನಾಂಕ: 01.07.2009 ರಿಂದ 30.06.2011 ರವರೆಗೆ ಎರಡು ವರ್ಷಗಳ ಅವಧಿಗೆ ಶಿವಮೊಗ್ಗ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಮೀಸಲು ಅರಣ್ಯಗಳು ಮತ್ತು ಸಣ್ಣ ಕಾಡುಗಳು, ಎಲ್ಲಾ ಸಣ್ಣ ಮತ್ತು ದೊಡ್ಡ ಕೆರೆ ದಂಡೆಗಳು, ಅರಣ್ಯ ಇಲಾಖೆಯ ಆಡಳಿತಕ್ಕೆ ಒಳಪಟ್ಟಿರುವ ಎಲ್ಲಾ ರಸ್ತೆ ಬದಿಯ ಮರಗಳು, ಕಾಯ್ದಿಟ್ಟ ಅರಣ್ಯ, ಸಣ್ಣ ಕಾಡುಗಳು, ಜಿಲ್ಲಾ ಕಾಡು (ಆಯಾ ವಲಯಗಳ ವ್ಯಾಪ್ತಿಗೆ ಒಳಪಟ್ಟಂತೆ ಮಾತ್ರ) ಮುಕ್ತ ಸರ್ಕಾರಿ ಜಮೀನು (ಮುಫತ್ ಮತ್ತು ಜಾಡಿ) ಕಾಡುಗಳಿಂದ ಈ ಕೆಳಗೆ ಸೂಚಿಸಿರುವ ತಪಶೀಲಿನಂತೆ ಗುತ್ತಿಗೆಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿವಮೊಗ್ಗ ವಿಭಾಗ, ಶಿವಮೊಗ್ಗ ಅಥವಾ ಅವರಿಂದ ನಿಯೋಜಿತರಾದವರಿಂದ ಟೆಂಡರ್ ಕಂ ಹರಾಜು ಮೂಲಕ ವಿಕ್ರಯಿಸಲ್ಪಡುತ್ತದೆ. ಸದರಿ ಟೆಂಡರ್ ಕಂ ಹರಾಜಿನಲ್ಲಿ ಇಲಾಖೆಯಿಂದ ತಪ್ಪಿತಸ್ಥರಾದ ಗುತ್ತಿಗೆದಾರರು ಭಾಗವಹಿಸಲು ಅನರ್ಹರಿರುತ್ತಾರೆ.

ಟೆಂಡರ್ ಸ್ವೀಕರಿಸುವ ದಿನಾಂಕ: 16.11.2009 ಮಧ್ಯಾಹ್ನ 4.00 ಗಂಟೆವರೆಗೆ ಹಾಗೂ ಹರಾಜು ದಿನಾಂಕ: 16.11.2009 ಮಧ್ಯಾಹ್ನ 4.30ಕ್ಕೆ ಅದೇ ದಿನ ಟೆಂಡರನ್ನು 04.45 ಕ್ಕೆ ತೆರೆಯಲಾಗುವುದು.

| ಕ್ರ. ಸಂ. | ಯೂನಿಟ್ ಸಂಖ್ಯೆ | ವಲಯದ ಹೆಸರು | ಅರಣ್ಯ ಉತ್ಪನ್ನದ ವಿವರ | ಇಎಂಡಿ ಮೊತ್ತ |
|---|---|---|---|---|
| 1 | I | ಆಗುಂಬೆ | ಮುರುಗನಹುಳಿ | 3000–00 |
| 2 | VI | ತೀರ್ಥಹಳ್ಳಿ | ತುಪ್ರಾ ಎಲೆ | 3000–00 |
| 3 | VII | ತೀರ್ಥಹಳ್ಳಿ | ಮುರುಗನಹುಳಿ | 3000–00 |
| 4 | IX | ಮಂಡಗದ್ದೆ | ಮುರುಗನಹುಳಿ | 3000–00 |
| 5 | X | ರಿಪ್ಪನ್‌ಪೇಟೆ | ತುಪ್ರಾ ಎಲೆ | 3000–00 |
| 6 | XV | ರಿಪ್ಪನ್‌ಪೇಟೆ (ಮಸರೂರು ಎಸ್.ಎಫ್) | ನೀಲಗಿರಿ ಸಿಟ್ರಿಡೋರ ಎಲೆ | 3000–00 |
| 7 | XVI | ರಿಪ್ಪನ್‌ಪೇಟೆ (ಬರುವೆ ಅರಸಾಳು ಎಸ್.ಎಫ್) | ನೀಲಗಿರಿ ಸಿಟ್ರಿಡೋರ ಎಲೆ | 3000–00 |

**ಷರತ್ತುಗಳು:**

1. ಮೇಲ್ಕಂಡ ಕಿರುಕಾಡು ಉತ್ಪನ್ನ ಸಂಗ್ರಹಿಸುವ ಯೂನಿಟ್‌ಗಳಿಂದ ಗ್ರಾಮ ಅರಣ್ಯ ಸಮಿತಿಗೆ ಸಂಬಂಧಿಸಿದ ಕ್ಷೇತ್ರ ಹಾಗೂ ಸಮುದಾಯ ಕ್ಷೇತ್ರಗಳನ್ನು ಹೊರತುಪಡಿಸಿದೆ.

2. ಎಫ್ಆರ್ಎಲ್ಹೆಚ್‌ಟಿ ಸಂಸ್ಥೆಯವರು ಸಂಗ್ರಹಣೆ ಮತ್ತು ನಿರ್ವಹಣೆ ಬಗ್ಗೆ (ಎನ್‌ಟಿಎಫ್‌ಪಿ) ಒಂದು ಯೋಜನೆಯನ್ನು ಹಮ್ಮಿಕೊಂಡಿದ್ದು, ಈ ಸಂಸ್ಥೆಗೆ ಸಂಬಂಧಪಟ್ಟ ಅರಣ್ಯ ಪ್ರದೇಶದಲ್ಲಿ ಈ ಮೇಲ್ಕಂಡ ಯಾವುದೇ ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಲು ಯಾವುದೇ ಹಕ್ಕು ಇರುವುದಿಲ್ಲ. ಬಾಳೆಹಳ್ಳಿ ಎಸ್.ಎಫ್ ನಲ್ಲಿ 250 ಹೆ. ಅರಣ್ಯ ಪ್ರದೇಶ
3. ಪ್ರತಿಯೊಂದು ಯೂನಿಟ್‌ಗೂ ಟೆಂಡರನ್ನು ಪ್ರತ್ಯೇಕವಾಗಿ ಸಲ್ಲಿಸುವುದು.
4. ಶಿವಮೊಗ್ಗ ವಿಭಾಗದಲ್ಲಿ ಅರಣ್ಯ ಗುತ್ತಿಗೆದಾರರಾಗಿ ನಿಮ್ಮ ಹೆಸರುಗಳನ್ನು ಪ್ರಸಕ್ತ ಸಾಲಿನಲ್ಲಿ ನೊಂದಾಯಿಸಿದವರು ಮಾತ್ರ ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲು ಅವಕಾಶ ಇರುತ್ತದೆ.
5. ಟೆಂಡರ್ ಫಾರಂನ ಬೆಲೆ ರೂ. 200–00 ಮತ್ತು ತೆರಿಗೆಗಳನ್ನು ಪಾವತಿಸಿ ಫಾರಂಗಳನ್ನು ಟೆಂಡರ್ ದಿನದಂದು ಪಡೆಯಬಹುದು. ಟೆಂಡರ್ ಫಾರಂಗಳನ್ನು ವರ್ಗಾಯಿಸಲು ಬರುವುದಿಲ್ಲ. ಟೆಂಡರ್ ಫಾರಂಗಳನ್ನು ಹರಾಜಿನ ದಿನ ಮಧ್ಯಾಹ್ನ 1–00 ಗಂಟೆಯವರೆಗೆ ಕಛೇರಿಯಲ್ಲಿ ಕೊಡಲಾಗುತ್ತದೆ.
6. ಹರಾಜಿನ ದಿನವೇ ಹೆಚ್ಚಿನ ಸವಾಲುದಾರರು ಗುತ್ತಿಗೆಯ ಅರ್ಧ ಭಾಗದ ಹಣ ಮತ್ತು ಪೂರ್ಣ ಗುತ್ತಿಗೆಯ ಹಣದ ಮೇಲೆ ಚಾಲ್ತಿಯಲ್ಲಿರುವ ತೆರಿಗೆಗಳನ್ನು (ವರಮಾನ ತೆರಿಗೆ ಸೇರಿದಂತೆ) ಸಂದಾಯ ಮಾಡಬೇಕು. ಉಳಿದ ಅರ್ಧಭಾಗದ ಗುತ್ತಿಗೆ ಹಣವನ್ನು ಗುತ್ತಿಗೆ ಕರಾರು ಮಾಡುವಾಗ ಸಂದಾಯ ಮಾಡಬೇಕು.
7. ಗುತ್ತಿಗೆದಾರರು ಟೆಂಡರ್ ಜೊತೆಯಲ್ಲಿ ನಿಗದಿಪಡಿಸಿದ ಇ.ಎಂ.ಡಿ. ಯನ್ನು ಡಿ.ಡಿ ರೂಪದಲ್ಲಿ ಮಾತ್ರ ಪಾವತಿಸಬೇಕು. ಡಿ.ಡಿ. ಮುಖಾಂತರ ಪಾವತಿಸದಿದ್ದ ಟೆಂಡರ್ ಫಾರಂಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಕಮರ್ಷಿಯಲ್ ಟ್ಯಾಕ್ಸ್ ಆಫೀಸರ್‌ನಿಂದ ಪಡೆದ ಎನ್.ಓ.ಸಿ. ಮತ್ತು ಸಾಲ್ವೆನ್ಸಿ ಸರ್ಟಿಫಿಕೇಟುಗಳನ್ನು ನಿಯಮಕ್ಕೆ ಅನುಸಾರವಾಗಿ ಲಗತ್ತಿಸಿರಬೇಕು.
8. ತಪ್ಪಿತಸ್ಥ ಗುತ್ತಿಗೆದಾರರು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವುದನ್ನು ನಿಷೇಧಿಸಿದೆ.
9. ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯದಲ್ಲಿ ಕಿರುಕಾಡು ಉತ್ಪನ್ನದ ಸಂಗ್ರಹಣೆಯನ್ನು ನಿಷೇಧಿಸಲಾಗಿದೆ.
10. ಜಯಶೀಲರಾದ ಗುತ್ತಿಗೆದಾರರು ಅದೇ ದಿನದಂದು ಶೇಕಡ 50 ಭಾಗದ ಹಣವನ್ನು ಸ್ಥಿರೀಕರಣದ ಆದೇಶ ತಲುಪಿದ ನಂತರದಲ್ಲಿ 15 (ಹದಿನೈದು) ದಿನದೊಳಗಾಗಿ ಪಾವ್ತಿಸತಕ್ಕದ್ದು. ತಪ್ಪಿದಲ್ಲಿ ಬಾಕಿ ಹಣಕ್ಕೆ ಬಡ್ಡಿಯನ್ನು ವಸೂಲಿ ಮಾಡಲು ಕ್ರಮ ಜರುಗಿಸಲಾಗುವುದು. ಈ ಕೆಳಸಹಿದಾರರಿಗೆ ಜಮಾ ಆಗಿರುವ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಂತರ ಸದರಿ ಟೆಂಡರನ್ನು ಮರು ಟೆಂಡರ್ ಮಾಡುವ ಅಧಿಕಾರ ಹೊಂದಿರುತ್ತಾರೆ.
11. ಹರಾಜಿನಲ್ಲಿ ಟೆಂಡರ್‌ದಾರರು ಬಿಡ್ಡುದಾರರ ಸವಾಲನ್ನು ಸ್ವೀಕರಿಸುವ : ತಿರಸ್ಕರಿಸುವ ಅಥವಾ ತಿದ್ದುಪಡಿ ಮಾಡುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ.
12. ಅನಿವಾರ್ಯ ಕಾರಣಗಳಿಂದಾಗಿ ಹರಾಜನ್ನು ಮುಂದೂಡುವ ರದ್ದುಪಡಿಸುವ ತಿರಸ್ಕರಿಸುವ ಅಧಿಕಾರವನ್ನು ಕಾಯ್ದಿರಿಸಿಕೊಂಡಿದೆ.
13. ಸರ್ಕಾರದ ಆದೇಶ ಸಂಖ್ಯೆ: ಎಫ್ಇಇ–50–ಎಫ್ಎಪಿ–2000 ಬೆಂಗಳೂರು ದಿನಾಂಕ: 19.06.2002 ರ ಪ್ರಕಾರ ಮುಂದಿನ ದಿನಗಳಲ್ಲಿ ಯಾವುದಾದರೂ ಅರಣ್ಯ ಪ್ರದೇಶಗಳು ಗ್ರಾಮ ಅರಣ್ಯ ಸಮಿತಿಗಳಿಗೆ ಹಸ್ತಾಂತರವಾದಲ್ಲಿ ಅಂತಹ ಪ್ರದೇಶಗಳಲ್ಲಿ ಕಿರು ಅರಣ್ಯ ಲಭ್ಯವಿದ್ದಲ್ಲಿ, ಅದನ್ನು ಸಂಗ್ರಹಿಸುವ ಹಕ್ಕು ಇರುವುದಿಲ್ಲ.
14. ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆದುಕೊಳ್ಳಬಹುದು.

**ಎಸ್. ವೆಂಕಟೇಸನ್**

ಪಿ.ಆರ್. 913 ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಟೆಂಡರ್ ಅಧಿಸೂಚನೆ

**ಸಂಖ್ಯೆ: ಸಿಆಸುಇ 413 ಡಿಟಿಎನ್ 2009, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2009**

ಮಾನ್ಯ ಮುಖ್ಯಮಂತ್ರಿಗಳು ಹಾಗೂ ಸಚಿವರುಗಳ ಅಧಿಕೃತ ನಿವಾಸ ಮತ್ತು ಕಚೇರಿಗಳಲ್ಲಿರುವ ಈ ಕೆಳಕಂಡ ಮಾದರಿಯ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆಗೆ ಒಳಪಡಿಸಲು ಸರ್ಕಾರವು ಉದ್ದೇಶಿಸಿದೆ. ಈ ಸಂಬಂಧ ಪ್ರಸಿದ್ದ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ವಾರ್ಷಿಕ ಸೇವಾ ನಿರ್ವಹಣಾ ಗುತ್ತಿಗೆ ಅವಧಿಯು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದವರೆಗೆ ಇರುತ್ತದೆ.

| ಕ್ರ. ಸಂ. | ಮಾದರಿ | ಒಟ್ಟು ಎಕ್ಸ್ ಟೆನ್‌ಷನ್ | ಒಟ್ಟು ಸಂಪರ್ಕ ವ್ಯವಸ್ಥೆ ಸಂಖ್ಯೆ |
|---|---|---|---|
| 1 | ನಿಟ್‌ಸುಕೋ ಎನ್‌ಕೇ ನೈಸ್ 32–ಐ ಸೀರೀಸ್ ಡಿಜಿಟಲ್ ಕೀ ಟೆಲಿಫೋನ್ ಸಿಸ್ಟಂ ಮತ್ತು 14 ಡಿಜಿಟಲ್ ಡಿಸ್‌ಪ್ಲೇ ಕೆಟಿಎನ್ ಉಪಕರಣ | 20 ಲೈನ್ಸ್ (14+6) | 1 ನಂ. |
| 2 | ನಿಟ್‌ಸುಕೋ ಎನ್‌ಕೇ ನೈಸ್ 32–ಐ ಸೀರೀಸ್ ಡಿಜಿಟಲ್ ಕೀ ಟೆಲಿಫೋನ್ ಸಿಸ್ಟಂ ಮತ್ತು 18 ಡಿಜಿಟಲ್ ಡಿಸ್‌ಪ್ಲೇ ಕೆಟಿಎನ್ ಉಪಕರಣ | 18 ಲೈನ್ಸ್ | 1 ನಂ. |
| 3 | ಪ್ಯಾನಾಸೋನಿಕ್ ಕೆಎಕ್ಸ್ ಟಿಎ:308 ಮಾದರಿ | (8+4) 12 ಲೈನ್ಸ್ | 1 ನಂ. |
| 4 | ಪ್ಯಾನಾಸೋನಿಕ್ ಕೆಎಕ್ಸ್ ಟಿಡಿ 308 | (3+1) 4 ಲೈನ್ಸ್ | 24 ನಂ. |

**ಟೆಂಡರ್‌ನ ಷರತ್ತುಗಳು ಈ ಕೆಳಕಂಡಂತಿವೆ:–**

1) ಮೊಹರು ಮಾಡಿರುವ ಟೆಂಡರ್‌ಗಳ ಲಕೋಟೆಯ ಮೇಲೆ "ಕೀ ಟೆಲಿಫೋನ್ / ಇಪಿಎಬಿಎಕ್ಸ್ ಸಂಪರ್ಕ ವ್ಯವಸ್ಥೆಯ ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಬರೆಯತಕ್ಕದ್ದು.
2) ವಾರ್ಷಿಕ ಸೇವಾ ನಿರ್ವಹಣೆ ವೆಚ್ಚದಿಂದ ಚಾಲ್ತಿಯಲ್ಲಿರುವ ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆಯನ್ನು ಬಿಲ್ಲು ಮೊತ್ತದಿಂದ ಕಡಿತಗೊಳಿಸಲಾಗುವುದು.
3) ದರಪಟ್ಟಿ ನೀಡುವ ಸಂಸ್ಥೆಗಳು ಈ ಮೇಲ್ಕಂಡ ಉಪಕರಣಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
4) ವಿಸ್ತಾರವಾದ ವಾರ್ಷಿಕ ನಿರ್ವಹಣೆಗೆ (ಬಿಡಿ ಭಾಗಗಳ ವೆಚ್ಚವು ಸೇರಿದಂತೆ) ದರ ನಮೂದಿಸತಕ್ಕದ್ದು.
5) ಟೆಂಡರ್‌ನೊಂದಿಗೆ ದಿನಾಂಕ: 30.03.2009ಕ್ಕೆ ಅನ್ವಯಿಸುವ ಆದಾಯ ತೆರಿಗೆ ಮತ್ತು ಸೇವಾ ತೆರಿಗೆ ಪಾವತಿ ಮಾಡಿರುವ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.
6) ಪ್ಯಾನಾಸೋನಿಕ್ ಮಾದರಿಯ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಗೆ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸಬಹುದು. ಅದೇ ರೀತಿ "ನಿಟ್‌ಸುಕೋ ಎನ್‌ಕೆ ನೈಸ್ 321" ಡಿಜಿಟಲ್ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಗೆ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸಬಹುದಾಗಿದೆ.
7) ದೂರು ಬಂದಾಗ ದುರಸ್ಥಿಪಡಿಸುವುದಲ್ಲದೆ, ಕನಿಷ್ಟ ತಿಂಗಳಿಗೊಮ್ಮೆ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (ಪ್ರಿವೆಂಟಿವ್ ಮೆಂಟೇನೆನ್ಸ್) ಮಾಡಿಸತಕ್ಕದ್ದು.
8) ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ತೃಪ್ತಿಕರವಾಗಿ ಸರ್ವೀಸ್ ಮಾಡಿದ ನಂತರ ಪ್ರತಿ 6 ತಿಂಗಳಿಗೊಮ್ಮೆ 2 ಕಂತುಗಳಲ್ಲಿ ವಾರ್ಷಿಕ ಸೇವಾ ನಿರ್ವಹಣಾ ಮೊತ್ತವನ್ನು ಸಂದಾಯ ಮಾಡಲಾಗುವುದು.
9) ದರಪಟ್ಟಿಯೊಂದಿಗೆ ಠೇವಣಿ (ಇ.ಎಂ.ಡಿ) ಹಣ ರೂ. 10,000–00ಕ್ಕೆ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು–1" ಇವರ ಹೆಸರಿಗೆ ಹೆಸರಿಸಿ ಲಗತ್ತಿಸತಕ್ಕದ್ದು. ರೂ. 10,000–00ಗಳ ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
10) ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
11) ಯಶಸ್ವಿ ಟೆಂಡರ್‌ದಾರರ ಟೆಂಡರ್‌ದಾರರ ಇ.ಎಂ.ಡಿ ಮೊತ್ತವನ್ನು ವಾರ್ಷಿಕ ಅವಧಿ ಮುಗಿದ ನಂತರ ಅವರ ಕಾರ್ಯ ನಿರ್ವಹಣೆ ಬಗ್ಗೆ ಯಾವುದೇ ದೂರು ಇಲ್ಲದಿದ್ದಲ್ಲಿ ಹಾಗೂ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಾಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
12) ಟೆಂಡರ್‌ಗಳನ್ನು ದಿನಾಂಕ: 16.11.2009ರಂದು ಮಧ್ಯಾಹ್ನ 3.00 ಗಂಟೆಯೊಳಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು–1, ಈ ಕಚೇರಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
13) ಯಾವುದೇ ಕಾರಣಗಳನ್ನು ನೀಡದೇ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.
14) ಟೆಂಡರ್‌ಗಳನ್ನು ಸರ್ಕಾರದ ಉಪಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಇವರ ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 17.11.2009ರ ಮಧ್ಯಾಹ್ನ 4.00 ಗಂಟೆಗೆ ತೆರೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

ಪಿ.ಆರ್. 911

